॥ ಶ್ರೀಮತೇ ರಾಮಾನುಜಾಯ ನಮಃ ॥

॥ ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥





# ಹಂಸ ಸಂದೇಶ

Voice of Hayagreeva



ಉಚಿತ ಮಾಸ ಪತ್ರಿಕೆ ಸಂಪುಟ : 4, ಸಂಚಿಕೆ : 5 ಶ್ರೀ ಪ್ಲವನಾಮ ಸಂವತ್ಸರ, ಶುಕ್ಲ ಪಕ್ಷ, ಭರಣಿ ನಕ್ಷತ್ರ (14–4–2021) ಬುಧವಾರ

Yathiraja Vedanta Trust



ರಂಗನಾಥಪದತ್ರಾಣ ದಯಾಪೂರ್ಣಾಽಽನಘಾ ಸತೀ ।
ಹಂಸಸಂದೇಶನಾಮ್ನೀ ಯಾ ಪತ್ರಿಕಾ ಲಸತಾತ್ ಸದಾ ॥

## ಸಂಪಾದಕೀಯ



ನಮ್ಮೆಲ್ಲರ ಜೀವನದಲ್ಲಿ ದಿನನಿತ್ಯದ ಕಾರ್ಯಗಳನ್ನು ನಿರ್ವಹಿಸಲು ಆಹಾರವು ಬಹುಮುಖ್ಯ ಪಾತ್ರ ವಹಿಸುತ್ತದೆ. ಯಾವುದೇ ಆಹಾರ/ಊಟ ರುಚಿಸುವುದು ಅದಕ್ಕೆ ಬಳಸುವ ಪದಾರ್ಥದಿಂದ ಮಾತ್ರವಲ್ಲ, ಯಾವಾಗ ಅದರ ಜೊತೆಗೆ ಪ್ರೀತಿ, ಭಕ್ತಿ ಸೇರುತ್ತದೆಯೋ ಆ ಊಟಕ್ಕೆ ಬೆಲೆ ಜಾಸ್ತಿ. ಹೋಟಲಲ್ಲೂ, ಮನೆಯಲ್ಲೂ, ದೇವಸ್ಥಾನದಲ್ಲೂ ಊಟ ಸಿಗುತ್ತದೆ. ಮೂರು ಕಡೆ ಬಳಸುವ ಪದಾರ್ಥ ಒಂದೇ. ಆದರೆ ಅದರ ಒಳಗಿರುವ ಭಾವ ಭಿನ್ನವಾಗಿರುತ್ತದೆ. ಹೋಟೆಲ್ಲಿನಲ್ಲಿ ಮಾರಲು ಎಂದು, ಅಮ್ಮನು ಮಗುವಿನ ಶಾರೀರಿಕ, ಮಾನಸಿಕ ಬೆಳವಣಿಗೆಗೆ ಎಂದು ದೇವಸ್ಥಾನದಲ್ಲಿ ಊಟವನ್ನು ಪ್ರಸಾದದ ರೂಪದಲ್ಲಿ ಭಕ್ತಿಭಾವದಿಂದ ಮಾಡಲಾಗುತ್ತದೆ. ಹಾಗಾಗಿ ಆಹಾರವು ಬೇರೆ ಬೇರೆಯಾಗಿ ರುಚಿಸುತ್ತವೆ. ಭಗವಂತನನ್ನು ಸ್ಮರಿಸುತ್ತ ಆಹಾರವನ್ನು ಸ್ವೀಕರಿಸಬೇಕು ಎಂಬುದು ನಮ್ಮ ಋಷಿಮಹರ್ಷಿಗಳು ಕೊಟ್ಟ ಸಂಸ್ಕಾರ. ಆಹಾರವನ್ನು ಹೇಗೆ, ಯಾವಾಗ, ಎಲ್ಲಿ ಸ್ವೀಕರಿಸಬೇಕು ಎಂಬುದಕ್ಕೆ ನಮ್ಮ ಆಚಾರ್ಯರು ತಿಳಿಸಿದ್ದಾರೆ. ಆದರೆ ಎಷ್ಟರ ಮಟ್ಟಿಗೆ ನಾವು ಪಾಲಿಸುತ್ತಿದ್ದೇವೆ ಎಂದು ನಾವೇ ಯೋಚಿಸಬೇಕಾಗಿದೆ. ನಮ್ಮ ಆಹಾರ, ವಿಚಾರ ಒಂದಾದರೆ ಹಲವು ಪ್ರಶ್ನೆಗಳಿಗೆ ಉತ್ತರ ಸಿಗುತ್ತದೆ. ಹಲವು ವಿಚಾರಗಳು ತಿಳಿದಿದ್ದರೂ ನಾವು ಆಚರಣೆಗೆ ತರಲು ಯೋಚಿಸುತ್ತೇವೆ. ಅದರಲ್ಲಿ ಒಂದಾದ ಆಹಾರದ ಬಗ್ಗೆ ತಿಳಿದು ನಮ್ಮ ಮುಂದಿನ ಪೀಳಿಗೆಗು ತಿಳಿ ಹೇಳಿ ಭಗವಂತನ ಕೃಪೆಗೆ ಪಾತ್ರರಾಗಿ ಸನ್ಮಾರ್ಗದಲ್ಲಿ ನಾವೆಲ್ಲರು ಸಾಗೋಣ.

"ಶ್ರೀಮತೇ ರಾಮಾನುಜಾಯ ನಮಃ"

ಡಾ. ಬಿ.ಕೆ. ರಘುನಂದನ್
ಸಂಪಾದಕರು

ಶ್ರೀರಂಜಿನಿ ಕೇಶವ
ಪ್ರಧಾನ ಸಂಪಾದಕರು

For Feedback and enquiries mail us at :

yathirajavedanta@gmail.com

॥ ಶ್ರೀ ॥

## HAYAGREEVA STOTRA



ಪರಿಸ್ಫುರನ್ನೂಪುರ ಚಿತ್ರಭಾನು–
ಪ್ರಕಾಶ ನಿರ್ಧೂತ ತಮೋನುಷಂಗಾಂ ।
ಪದದ್ವಯೀಂ ತೇ ಪರಿಚಿನ್ಮಹೇಂತಃ
ಪ್ರಬೋಧ ರಾಜೀವ ವಿಭಾತ ಸಂಧ್ಯಾಂ ॥

"We worship, contemplate ever uninterruptedly, on the Twin -feet of Lord Hayagreeva" says Swamy in this verse. Such a contemplation, meditation, deep dhyana, has a great potency. The Lord's anklets , radiating a brilliance, especially in different light – colours, would prove a kind of figurative sunrise! This metaphorical sunlight will dispel our internal darkness – namely , nescience, marked by ignorance, vagueness of understanding, doubts, confusions, wrong conceptions, etc. The sunrise makes a lotus ; waking up my mind figuratively.

We therefore, join together, meditate on the Lord"sTwin-Feet without any interruption.



H H Sri Paravakottai
Chinna Andavan

## ಸರ್ವರಿಗೂ ಯುಗಾದಿ ಹಬ್ಬದ ಶುಭಾಷಯಗಳು



# ಶ್ರೀ ವೇದಾಂತ ದೇಶಿಕರ ಶ್ರೀ ಪಾದುಕಾ ಸಹಸ್ರ

**ಸ್ವಚ್ಛಾಕಾರಾಂ ಸ್ವರಯುವತಯಃ ಸ್ವಪ್ರತಿಚ್ಛಂದಲಕ್ಷ್ಯಾತ್**
**ಗಾಹಂತೇ ತ್ವಾಂ ಪ್ರಣತಿಸಮಯೇ ಪಾದುಕೇ! ಸಾಭಿಮಾನಾಃ।**
**ಸ್ತ್ರೀರತ್ನಾನಾಂ ಪರಿಭವವಿಧೌ ಸೃಷ್ಟಿಮಾತ್ರೇಣ ದಕ್ಷಾಂ**
**ನೀಚೈಃ ಕರ್ತುಂ ಸರಸಖ ಮುನೇರೂರ್ವಶೀಮೂರುಜಾತಾಂ॥**

ಶ್ರೀ ವೇದಾಂತ ದೇಶಿಕರ ಶ್ರೀಪಾದುಕಾಸಹಸ್ರದ 32 ಪದ್ಧತಿಗಳಲ್ಲಿ ಬಿಂಬಪ್ರತಿಬಿಂಬ ಪದ್ಧತಿಯಲ್ಲಿ ಬರುವ ಶ್ಲೋಕವಿದು.

ಹಿಂದೆ ಒಂದು ಕಾಲದಲ್ಲಿ "ನಾರಾಯಣ" ಎಂಬ ಹೆಸರಿನ ಮಹರ್ಷಿಯೊಬ್ಬರು ತಪಸ್ಸು ಮಾಡುತ್ತಿದ್ದಾಗ, ದೇವೇಂದ್ರನು ಆ ತಪಸ್ಸನ್ನು ಭಂಗ ಮಾಡಲು ಅಪ್ಸರ ಸ್ತ್ರೀಯರನ್ನು ಕಳುಹಿಸುತ್ತಾನೆ. ಕೆಲವು ಅಪ್ಸರೆಯರು ಋಷಿಯ ಹತ್ತಿರ ಹೋದಂತೆ, ನಾರಾಯಣ ಮಹರ್ಷಿಯು ತಮ್ಮ ತೊಡೆಯನ್ನ ತಟ್ಟಿದರು. ಅದರಿಂದ ಊರ್ವಶಿ ಎಂಬ ಸುಂದರವಾದ ಅಪ್ಸರೆಯು ಉಂಟಾದಳು. ಊರು ಎಂದರೆ ತೊಡೆ, ಮಹರ್ಷಿಯ ತೊಡೆಯಿಂದ ಉಂಟಾದವಳು, ಆದ ಕಾರಣ, ಅವಳನ್ನು ಊರ್ವಶೀ ಎನ್ನುತ್ತಾರೆ. ಇವಳ ಸೌಂದರ್ಯವನ್ನು ನೋಡಿ ಇಂದ್ರನು ಕಳುಹಿಸಿದ ಅಪ್ಸರೆಯರು ನಾಚಿ, ಅವಮಾನ ಪಟ್ಟು ಓಡಿಹೋದರೆಂದು ಪುರಾಣಗಳು ಹೇಳುತ್ತದೆ.

ಈಗ ಅದೇ ಸ್ತ್ರೀಯರು ಭಗವಂತನನ್ನು ನಮಸ್ಕರಿಸಲು ಬಂದಾಗ ಭಗವಂತನು ಧರಿಸಿರುವ ಪಾದುಕಾದೇವಿಯಲ್ಲಿ ಅವರ ಪ್ರತಿಬಿಂಬಗಳು ತೋರುತ್ತದೆ. ಇವನ್ನು ನೋಡಿದರೆ, ಹಿಂದೆ ಊರ್ವಶಿಯಿಂದ ಅವಮಾನಗೊಂಡು ಕಷ್ಟಪಟ್ಟ ಕಾರಣ ಅದೇ ಊರ್ವಶಿಯನ್ನು ತಾವೂ ಅವಮಾನಿಸುವುದಕ್ಕಾಗಿ, ಅವಳಿಗಿಂತಲೂ ಸೌಂದರ್ಯವನ್ನು ಪಡೆಯುವುದಕ್ಕಾಗಿ ಅವರಿಗಿಂತಲೂ ಉತ್ತಮವಾದ ಪಾದುಕಾದೇವಿಯನ್ನು ಆಶ್ರಯಿಸಿದಂತೆ ತೋರುತ್ತಿದೆ ಎಂದು ಆಚಾರ್ಯರು ವರ್ಣಿಸುತ್ತಾರೆ.

**ಏಕಾಮೇಕಃ ಕಿಲನಿರವಿಶತ್ವಾದುಕೇ ದ್ವಾರಕಾಯಾಂ**
**ಕ್ರೀಡಾಯೋಗೀ ಕೃತಬಹುತನುಃ ಷೋಡಶಸ್ತ್ರೀ ಸಹಸ್ರೇ।**
**ಶುದ್ಧೇದೇವಿ ತ್ವದುಪನಿಹಿತೇ ಬಿಂಬಿತೋ ರತ್ನಜಾಲೇ**
**ಭುಂಕ್ತೇ ನಿತ್ಯಂ ಸ ಖಲು ಭವತೀಂ ಭೂಮಿಕಾನಾಂ ಸಹಸ್ರೈಃ॥**


ಉ.ವೇ. ಭರತ್ ಭಟ್ಟರ್

ಭಗವಂತನು ಶ್ರೀಕೃಷ್ಣನಾಗಿ ಅವತರಿಸಿದಾಗ, ತಾನೇ ನಿರ್ಮಿಸಿದ ದ್ವಾರಕಾ ಪಟ್ಟಣದಲ್ಲಿ ತಾನು ಕ್ರೀಡಾಲೋಲನಾದ ಕಾರಣ ಹದಿನಾರು ಸಾವಿರ ಸ್ತ್ರೀಯರನ್ನು ವಿವಾಹವಾಗಿ ಒಬ್ಬಳನ್ನು ಒಬ್ಬನಾಗಿ, ತಾನು ಹದಿನಾರು ಸಾವಿರ ಶರೀರವನ್ನು ಪಡೆದು ಅನುಭವಿಸಿದವನಂತೆ; ಶರೀರವೆಂದರೇ ಅದು ದಿವ್ಯಮಂಗಳ ವಿಗ್ರಹ. ಈಗ ಭಗವಂತನ ಪ್ರತಿಬಿಂಬವು ಪಾದುಕಾದೇವಿಯಲ್ಲಿ ತೋರುವಾಗ, ಪಾದುಕೆಯಲ್ಲಿ ಅನೇಕ ರತ್ನಗಳಲ್ಲಿ ಭಗವಂತನು ಪ್ರತಿಬಿಂಬಿಸುವುದರಿಂದ ಎಷ್ಟು ಪ್ರತಿಬಿಂಬವು ಅಷ್ಟು ರೂಪಗಳನ್ನು ತಾಳಿ ಅವಳೊಬ್ಬಳನ್ನೇ (ಪಾದುಕಾದೇವಿಯನ್ನೇ) ಅನುಭವಿಸುವಂತಿದೆ.

ಅಂದರೆ, ಹಿಂದೆ 16 ಸಾವಿರಕ್ಕೆ ತಾನೂ ಒಬ್ಬಳಿಗೆ ಒಬ್ಬನಾಗಿ 16 ಸಾವಿರ ರೂಪಗಳನ್ನು ಪಡೆದು ಅನುಭವಿಸಿದ. ಈಗ 16 ಸಾವಿರಕ್ಕಿಂತಲೂ ಮೇಲ್ಪಟ್ಟ ರೂಪಗಳನ್ನು ತಾಳಿ ಪಾದುಕಾದೇವಿಯೊಬ್ಬಳನ್ನೇ ಅನುಭವಿಸಲು ಹೋದಂತೆ ಕಾಣುತ್ತದೆ ಎಂದು ಆಚಾರ್ಯರ ಅದ್ಭುತವಾದ ವರ್ಣನೆ.

---

## ಈಶಾವಾಸ್ಯೋಪನಿಷತ್
### (ಮಂತ್ರಗಳ ಕಿರುಪರಿಚಯ)

- ಡಾ॥ ಎ. ಶ್ರೀನಿವಾಸ ರಂಗನ್

**ಮಂತ್ರ –೨** ಕರ್ಮಗಳು ಎರಡು ಬಗೆ– ನಿತ್ಯ ಮತ್ತು ನೈಮಿತ್ತಿಕ. ಸ್ನಾನ ಸಂಧ್ಯೋಪಾಸನೆ ಇತ್ಯಾದಿ ನಿತ್ಯ ಕರ್ಮಗಳು. ನಿಮಿತ್ತದಿಂದ ಬರುವ ಕರ್ಮಗಳು, ಅಂದರೆ ಸಂಕ್ರಮಣ, ಅಮಾವಾಸ್ಯೆಇತ್ಯಾದಿ ನೈಮಿತ್ತಿಕ ಕರ್ಮಗಳು. ಇವೆರಡೂ ಆಜ್ಞಾಕರ್ಮಗಳು. ಇವು ತಪ್ಪಬಾರದು. ಇವುಗಳನ್ನು ಆಚರಿಸುವಾಗ ಕರ್ತೃತ್ವತ್ಯಾಗ, ಸಂಬಂಧತ್ಯಾಗ ಮತ್ತು ಫಲ ತ್ಯಾಗದೊಂದಿಗೆ ಅಂದರೆ, 'ಅದುತನ್ನದು ಎಂಬ ಸಂಗ, ಅದರ ಫಲ ತನಗೆ ಎಂಬ ಆಸೆ, ಅದರಕರ್ತೃತಾನೇ ಎಂಬ ಅಹಂಕಾರ' ಇವುಗಳನ್ನು ಬಿಟ್ಟುತಾನು ಬದುಕಿರುವವರೆಗೂ ಕರ್ಮವನ್ನು ಆಚರಿಸಬೇಕು. ಆಗ ಅವು ಬಂಧನವಾಗುವುದಿಲ್ಲ ಎಂಬುದನ್ನು 'ಕುರ್ವನ್ನೇವೇಹ....' ಎಂಬ ಮಂತ್ರವು ತಿಳಿಸುತ್ತದೆ.

कुर्वन्नेवेह कर्माणिजिजीविषेत्शतंसमाः ।
एवंत्वयिनान्यथेतोऽस्तिनकर्मलिप्यतेनरे ॥ (ई–२)

ಈ ಲೋಕದಲ್ಲಿ ವಿಹಿತವಾದ ಕರ್ಮಗಳನ್ನು ಮಾಡುತ್ತಲೇ ನೂರು ವರುಷಗಳು ಜೀವಿಸಲು ಇಚ್ಛಿಸಬೇಕು. (ಹೀಗೆ ಕರ್ತವ್ಯ ನಿಷ್ಠೆಯಲ್ಲಿರುವ) ನಿನಗೆ ಬೇರೆ ರೀತಿಯಾದ ಜೀವನವು ಇಲ್ಲ. ಹೀಗೆ ತತ್ತ್ವವನ್ನು ತಿಳಿದ ಮನುಷ್ಯರಲ್ಲಿ ಕರ್ಮವು ಅಂಟುವುದಿಲ್ಲ.

ಈ ಮಂತ್ರದಲ್ಲಿ ಮುಮುಕ್ಷುವಿನ ಕರ್ತವ್ಯವನ್ನು ಹೇಳಿದೆ. ಜೀವಿಸಿರುವವರೆಗೂ ಕರ್ಮವನ್ನು ಮಾಡುತ್ತಲೇ ಇರಬೇಕೆಂದಿದೆ. ಹೀಗೆ ಕರ್ಮ ಮಾಡಿದರೆ 'ಮೋಕ್ಷಕ್ಕೆ ವಿರುದ್ಧವಾದ ಸ್ವರ್ಗಾದಿ ಫಲಗಳು ನಮಗೆ ಅಂಟುವುದಿಲ್ಲವೇ?' ಎಂಬ ಸಂದೇಹಕ್ಕೆ, 'ಸಾಧಕನಿಗೆ ಆತ್ಮಜ್ಞಾನವೂ, ಈಶ್ವರ ಜ್ಞಾನವೂ ಇರುವುದರಿಂದ ಅವನು ಮಾಡುವ ಕರ್ಮಗಳೂ ನಿಷ್ಕಾಮಕರ್ಮವಾಗಿರುವುದರಿಂದ ಮೋಕ್ಷಕ್ಕೆ ವಿರುದ್ಧವಾದ ಫಲಗಳು ಅಂಟುವುದಿಲ್ಲ' ಎಂದಿದೆ. ಶಾಸ್ತ್ರದಲ್ಲಿ ತಿಳಿಸಿರುವ ನಿತ್ಯನೈಮಿತ್ತಿಕ ಕರ್ಮಗಳನ್ನು ಕರ್ತೃತ್ವತ್ಯಾಗ, ಸಂಬಂಧ ತ್ಯಾಗ ಮತ್ತು ಫಲ ತ್ಯಾಗದೊಡನೆ ಆಚರಿಸುತ್ತಾ ನೂರು ವರುಷಗಳು ಬಾಳಲು ಇಚ್ಛಿಸಬೇಕಾಗಿ ತಿಳಿಸಿದೆ.






॥ ಶ್ರೀಮತೇ ರಾಮಾನುಜಯಾ ನಮ: ॥

# ಶ್ರೀ ಭಗವದ್ರಾಮಾನುಜ ವಿರಚಿತವಾದ ಶಾರೀರಕ ಮೀಮಾಂಸಾಭಾಷ್ಯದಲ್ಲಿ

**ಮೂರನೆಯ ಅಧ್ಯಾಯದ(ಸಾಧನಾಧ್ಯಾಯ) – ಮೊದಲನೆಯ ಪಾದ (ಜೀವದೋಷಪಾದ)**

- ಡಾ॥ ಎ. ಶ್ರೀನಿವಾಸ ರಂಗನ್

**4. ತತ್ಸ್ವಾಭಾವ್ಯಾಪತ್ತ್ಯಧಿಕರಣ:–**

ಇಷ್ಟ, ಪೂರ್ತ ಮೊದಲಾದವನ್ನು ಮಾಡಿದವರು, 'ಚಂದ್ರಲೋಕದಿಂದ ಭೂತಸೂಕ್ಷ್ಮಗಳೊಂದಿಗೆ ಕೂಡಿ ಇಳಿಯುವಾಗ ಕರ್ಮಶೇಷದೊಂದಿಗೆ ಇಳಿಯುವರು'ಎಂದು ಹೇಳಲಾಯಿತು. ಚಂದ್ರಲೋಕದಿಂದ ಇಳಿಯುವ ಜೀವನು ಆಕಾಶಾದಿಗಳನ್ನು ಸೇರುವಾಗ, ದೇವಭಾವ, ಮನುಷ್ಯಭಾವ ಮೊದಲಾದವನ್ನು ಹೊಂದುವಂತೆ, ಅವನು ಆಕಾಶಾದಿಭಾವವನ್ನು ಹೊಂದುವನೋ? ಅಥವಾ ಅದರ ಸಾದೃಶ್ಯ (ಅಂದರೆ ಸ್ವಭಾವ)ವನ್ನು ಹೊಂದುವನೋ? (ಇದರ ಅರ್ಥ ಜೀವನು ಪರಿಣಾಮ ಹೊಂದುವನೋ? ಇಲ್ಲ, ಅದರ ಸಾದೃಶ್ಯದಿಂದ ಸಂಬಂಧ ಹೊಂದುವನೋ? ಎಂಬುದಾಗಿ). ಇದು ಈ ಅಧಿಕರಣದ ವಿಷಯ.

('ದೇವಭಾವ, ಮನುಷ್ಯಭಾವ ಮೊದಲಾದವನ್ನು ಹೊಂದುವಂತೆ' ಎಂಬುದರ ಅರ್ಥ– ಆತ್ಮನಿಗೆ ಪರಿಣಾಮವಿಲ್ಲ. ಆತ್ಮವು ಕರ್ಮಕ್ಕಧೀನವಾಗಿ ದೇವ ಶರೀರವನ್ನೋ, ಮನುಷ್ಯ ಶರೀರವನ್ನೋ, ಪ್ರಾಣಿ ಶರೀರವನ್ನೋ ಸೇರಬಹುದು ಆಗ ಅದನ್ನು ದೇವ, ಮನುಷ್ಯ, ಪ್ರಾಣಿ ಎನ್ನುತ್ತಾರೆ. ಆತ್ಮವೇ ಮನುಷ್ಯ ಮುಂತಾದುದಲ್ಲ. ಆ ಶರೀರ ಸಂಬಂಧದಿಂದವುಂಟಾದುದು)

**ಸಿದ್ಧಾಂತ** – ಜೀವನು ಆಕಾಶಾದಿ ಸಾದೃಶ್ಯಾಪತ್ತಿಯನ್ನು ಮಾತ್ರ ಹೊಂದುತ್ತಾನೆ. ಜೀವನಕರ್ಮಕ್ಕನುಗುಣವಾಗಿ ಸುಖದು:ಖಗಳು ವುಂಟಾಗುತ್ತವೆ. ಇವುಗಳನ್ನು ಅನುಭವಿಸಲು ಶರೀರ ಪ್ರಾಪ್ತಿ. ಆದ್ದರಿಂದ'ಸೋಮಭಾವ', 'ಮನುಷ್ಯಭಾವ' ಮೊದಲಾದವುಗಳಲ್ಲಿ ಆಯಾ ಭಾವಗಳು ಸುಖದು:ಖಗಳ ಅನುಭವಕ್ಕಾಗಿ ಆಗುವುದಷ್ಟೆ. ಆದರೆ, ಅಕಾಶಾದಿಗಳಲ್ಲಿ ಸುಖದು:ಖದ ಅನುಭವವೇ ಇಲ್ಲದಿರುವುದರಿಂದ ಆ ಭಾವವನ್ನು ಹೊಂದುವುದು ಉಪಪನ್ನವಾಗುವುದಿಲ್ಲ. **ಆದುದರಿಂದ 'ಆಕಾಶಾದಿಗಳಾಗುವನು' ಎಂಬ ವಚನದ ಅಭಿಪ್ರಾಯವು 'ಅವುಗಳ ಸಂಸರ್ಗದಿಂದ ಆದ ಸಾದೃಶ್ಯವನ್ನು ಹೊಂದುತ್ತಾನೆ' ಎಂಬುದಾಗಿದೆ.**

**5. ನಾತಿಚಿರಾಧಿಕರಣ:–**

ಜೀವನು 'ಆಕಾಶವನ್ನು ಸೇರಿದ ಕಾಲದಿಂದ, ಧಾನ್ಯ ಮೊದಲಾದವನ್ನು ಸೇರುವ ಕಾಲದವರೆಗೂ, ಒಂದೊಂದು ಅವಸ್ಥೆಯಲ್ಲೂ ಬಹು ಕಾಲ ನಿಲ್ಲುವನೋ? ಅಥವಾ ಈ ಬಗೆಗೆ ನಿಯಮವೇನೂ ಇಲ್ಲವೋ?' ಎಂಬುವುದು ಈ ಅಧಿಕರಣದ ವಿಷಯ.

**ಸಿದ್ಧಾಂತ** – 'ಆಕಾಶಾದಿಗಳಲ್ಲಿ ಬಹಲಕಾಲ ಇರುವುದಿಲ್ಲ', ಏಕೆಂದರೆ ಮುಂದೆ ಧಾನ್ಯಾದಿಗಳನ್ನು ಸೇರಿದಾಗ 'ಇಲ್ಲಿಂದ ಹೊರಕ್ಕೆ ಬರುವುದು ಇನ್ನೂ ಕಷ್ಟಕರವಷ್ಟೆ (ಛಾಂ.5–10–6)'ಎಂದು ಶ್ರುತಿಯಲ್ಲಿ ಅಲ್ಲಿಂದ ಹೊರಬರುವುದು ಕಷ್ಟವೆಂದು ಹೇಳಿದೆ. ಹೀಗೆ 'ಧಾನ್ಯಾದಿಗಳನ್ನು ಸೇರಿದಾಗ ಅಲ್ಲಿಂದ ಹೊರಕ್ಕೆ ಬರುವುದು ಕಷ್ಟಕರ'ಎಂದು ಹೇಳುವಾಗ, ಅದಕ್ಕೆ ಪೂರ್ವದಲ್ಲಿ **'ಆಕಾಶಾದಿಗಳಲ್ಲಿ ಬಹಳಕಾಲ ಇರುವುದಿಲ್ಲ' ಎಂದು ತಿಳಿಯುತ್ತದೆ.**

**6. ಅನ್ಯಾಧಿಷ್ಠಿತಾಧಿಕರಣ:–**

ಚಂದ್ರಲೋಕದಿಂದ ಇಳಿಯುವ ಜೀವರುಇಲ್ಲಿ ಬತ್ತ, ಜವೆ ಮುಂತಾದಾಗಿ ಹುಟ್ಟುತ್ತಾರೆಂಬುದನ್ನು ಶ್ರುತಿಯಲ್ಲಿ 'ಮೇಘವಾಗ ಮಳೆಗರೆಯುತ್ತಾರೆ. ಅವರು ಇಲ್ಲಿ ಬತ್ತ, ಜವೆ, ಗಿಡಮರಗಳು, ಎಳ್ಳು, ಉದ್ದುಗಳು ಎಂಬುವ ಈ ಪ್ರಕಾರದಲ್ಲಿ ಹುಟ್ಟುತ್ತಾರೆ (ಛಾಂ.5–10–6)' ಹೀಗೆ ಹೇಳಿದೆ. ಇಲ್ಲಿ ಬರುವ ಸಂಶಯ ಹೀಗಿದೆ 'ಚಂದ್ರಲೋಕದಿಂದ ಬರುವ ಜೀವರು ಬತ್ತ, ಜವೆ ಮೊದಲಾದ ಶರೀರಗಳನ್ನು ಹೊಂದಿರುವ ಬೇರೆ ಭೋಕ್ತೃಗಳಿಂದ ಅಧಿಷ್ಠಿತವಾದ ಬತ್ತ ಮೊದಲಾದವುಗಳನ್ನು ಅವರು ಸಂಶ್ಲೇಷಿಸುವರೋ? (ಅಂದರೆ ಬತ್ತ ಮೊದಲಾದವುಗಳಿಗೆ ಆತ್ಮಾಗಿರವರ ಜೊತೆ ಸಂಶ್ಲೇಷವೇ) ಅಥವಾ ಅವರೇ ಬತ್ತ, ಜವೆ ಮುಂತಾದಾವುಗಳ ಶರೀರವನ್ನು ಹೊಂದಿ ಹುಟ್ಟುತ್ತಾರೆಯೋ?

**ಸಿದ್ಧಾಂತ** – 'ಇತರ ಜೀವರುಗಳಿಂದ ಅಧಿಷ್ಠಿತವಾದ ಬತ್ತ, ಜವೆ ಮುಂತಾದ ಶರೀರದಲ್ಲಿ ಅವರು ಸಂಶ್ಲೇಷ ಮಾತ್ರ ಹೊಂದುತ್ತಾರೆ.' ಆಕಾಶದಿಂದ ಹಿಡಿದು ಮೇಘದವರೆಗೂ ಕೇವಲ ಸಾದೃಶ್ಯವನ್ನೇ ಹೇಳಿದೆ. ಇಲ್ಲಿ ಜೀವರಿಗೆ ಅನುಭವಿಸಲು (ಅಂದರೆ ಭೋಕ್ತೃತ್ವಕ್ಕೆ) ಯಾವಕಾರಣವೂ ಇಲ್ಲದಿರುವುದರಿಂದ ಬತ್ತ, ಜವೆ ಮುಂತಾದ ಜನ್ಮವನ್ನು ಪಡೆಯುವುದಿಲ್ಲ. 'ಆಕಾಶ ಮೊದಲಾದವುಗಳ ಭಾವವನ್ನು ಹೊಂದುವನು' ಎನ್ನುವ ಹಾಗೆ, 'ಬತ್ತ, ಜವೆ ಮೊದಲಾದ ಭಾವದಿಂದ ಹುಟ್ಟುವನು' ಎಂಬ ವಚನ ಗೌಣವಾದುದು.

ಶ್ರುತಿಯಲ್ಲಿ 'ಯಾವ ಯಾವನು ಅನ್ನವನ್ನು ತಿನ್ನುತ್ತಾನೋ, ಯಾವನು ರೇತಸ್ಸನ್ನು ಸೇಚನ ಮಾಡುತ್ತಾನೋ, ಅವನ ಭಾವದವನೇ ಆಗುತ್ತಾನೆ (ಛಾಂ.5–10–6)' ಕರ್ಮಶೇಷದೊಡನೆ ಇಳಿಯುವವನಿಗೆ ರೇತಸ್ಸೇಚನ ಭಾವವುರೇತಸ್ಸೇಚನ ಮಾಡುವವನೊಡನೆ ಆಗುವ ಸಂಬಂಧವನ್ನು ಮಾತ್ರ ಹೇಳುವಹಾಗೆ, ಇಲ್ಲಿಯೂ ಕೂಡ ವ್ರೀಹ್ಯಾದಿಭಾವವೆಂಬುದು ವ್ರೀಹ್ಯಾದಿ ಶರೀರಗಳಲ್ಲಿರುವವರೊಡನೆ ಆಗುವ ಸಂಶ್ಲೇಷವೇ ಆಗಿದೆ. **ಆದ್ದರಿಂದ 'ಚಂದ್ರಲೋಕದಿಂದ ಇಳಿಯುವ ಜೀವರು ಇತರ ಜೀವರುಗಳಿಂದ ಅಧಿಷ್ಠಿತವಾದ ಬತ್ತ, ಜವೆ ಮುಂತಾದ ಶರೀರದಲ್ಲಿ ಸಂಶ್ಲೇಷ ಮಾತ್ರ ಹೊಂದುತ್ತಾರೆ.'**

**ಶ್ರೀ ಭಗವದ್ರಾಮಾನುಜ ವಿರಚಿತವಾದ ಶಾರೀರಕ ಮೀಮಾಂಸಾಭಾಷ್ಯದಲ್ಲಿ**



॥ श्री कृष्णाय परब्रह्मणे नमः ॥

## ಶ್ರೀಕುಲಶೇಖರಾಳ್ವಾರ್‌ರವರು ರಚಿಸಿರುವ "ಮುಕುಂದಮಾಲಾ"

– ಡಾ. ಕೆ.ವಿ. ಪದ್ಮಾವತಿ

**॥ ಶ್ರೀಮತೇ ಗೋಪಾಲಮಹಾದೇಶಿಕಾಯ ನಮಃ ॥ ॥ ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ॥**
**॥ ಶ್ರೀಮತೇ ಭಗವತೇ ರಾಮಾನುಜಾಯ ನಮಃ ॥**

९. करचरणसरोजे कान्तिमन्नेत्रमीने
श्रममुषिभुजवीचिव्याकुलेऽगाधमार्गे
हरिसरसि विगाह्यापीय तेजोजलौघं
भवमरुपरिखिन्नः खेदमद्य त्यजामि ॥

अन्वयार्थः :– करचरणसरोजे ಕಮಲದಂತೆ ಇರುವ ಕರಚರಣಗಳು कान्तिमन्नेत्रमीने ಮೀನುಗಳ ಕಣ್ಣಿನಂತೆ ಕಾಂತಿಯುಕ್ತವಾದ ಕಣ್ಣುಗಳು श्रममुषि ಶ್ರಮವನ್ನು ಹೋಗಲಾಡಿಸುವ भुजवीचिव्याकुले ಅಲೆಗಳಂತೆ ಇರುವ ಭುಜಗಳು अगाधमार्गे ಅಗಾಧವಾದ ಮಾರ್ಗವುಳ್ಳ हरिसरसि ಹರಿಯೆಂಬ ಸರೋವರದಲ್ಲಿ विगाह्य ಮುಳುಗಿ तेजोजलौघं ತೇಜಸ್ಸನ್ನುಳ್ಳ ನೀರಿನ ರಾಶಿಯನ್ನು आपीय ಕುಡಿದು भवमरुपरिखिन्नः ಸಂಸಾರವೆಂಬ ಮರುಭೂಮಿಯಲ್ಲಿ ಬಳಲಿದ ನಾನು अद्य ಈ ದಿನ खेदं ದುಃಖವನ್ನು त्यजामि ತ್ಯಜಿಸುತ್ತೇನೆ.

ಕಮಲದಂತೆ ಇರುವ ಕರಚರಣಗಳು, ಮೀನುಗಳ ಕಣ್ಣಿನಂತೆ ಕಾಂತಿಯನ್ನು ಹೊಂದಿರುವ, ಶ್ರಮವನ್ನು ಹೋಗಲಾಡಿಸುವ ಅಲೆಗಳಂತೆ ಇರುವ ಭುಜಗಳನ್ನು ಉಳ್ಳ, ಅಗಾಧವಾದ ಮಾರ್ಗವುಳ್ಳ ಹರಿಯೆಂಬ ಸರೋವರದಲ್ಲಿ ಮುಳುಗಿ ತೇಜಸ್ಸನ್ನು ಉಳ್ಳ ನೀರಿನ ರಾಶಿಯನ್ನು ಕುಡಿದು ಇದುವರೆಗೂ ಸಂಸಾರವೆಂಬ ಮರುಭೂಮಿಯಲ್ಲಿ ಬಳಲಿದ ನಾನು ದುಃಖವನ್ನು ತ್ಯಜಿಸುತ್ತೇನೆ.

ಈ ಶ್ಲೋಕದಲ್ಲಿ ಬಿಸಿಲಿನ ತಾಪದಲ್ಲಿ ಬೆಂದವನಿಗೆ ಕುಡಿಯಲು ನೀರು, ನಿಲ್ಲಲು ನೆರಳು ಇವೆಲ್ಲಾ ದೊರಕಿದರೆ ಹೇಗೆ ಸಂತೋಷವೋ ಹಾಗೇ ದೇವರನ್ನು ನಾವು ಕಂಡಾಗ ಆಗುವ ಆನಂದಕ್ಕೆ ಪಾರವೇ ಇಲ್ಲ. ಸಂಸಾರ ಸಾಗರದಲ್ಲಿರುವ ನಮಗೆ ಆ ಹರಿಯು ಸರೋವರದಂತೆ ಕಾಣುತ್ತಾನೆ. ಕೊಳವನ್ನು ಉದಾಹರಣೆಯನ್ನಾಗಿ ತೋರಿಸಿ ಆ ಕೃಷ್ಣನು ಎಂತಹವನು ಎಂದು ತೋರಿಸಿದ್ದಾರೆ. ರಾಮಾಯಣದಲ್ಲಿ ಸೀತೆಯು "ನಾಥಂರಾಮಂರಾಜೀವಲೋಚನವ್" ರಾಮನ ಕಣ್ಣುಗಳು ಸುಂದರವಾಗಿದೆ ಎಂದು ತಿಳಿಸಿರುವಳು. ನಮ್ಮಾಳ್ವಾರ್‌ರವರು "ಮಾಯಕ್ಕೂತ್ತಾ ವಾಮನಾ ವಿನೈಯೇನ್ ಕಣ್ಣಾಕಣ್‌ಕೈಕಾಲ್‌ತೂಯ ಶೆಯ್ಯ ಮಲರ್ಹಳಾ ಶೋದಿ ಚ್ಚೆವ್ವಾಯ್ ಮುಹಿರಿದಾ" ಅಂದರೆ ವಾಮನರೂಪಿಯೇ ನಿನ್ನ ನೇತ್ರಗಳು, ಹಸ್ತಗಳು, ಮತ್ತು ಚರಣಗಳು ಪರಿಶುದ್ಧವಾದ ಅರುಣವರ್ಣದ ಪುಷ್ಪಗಳಾಗಿಯೂ, ಮಂದಸ್ಮಿತದಿಂದ ಬಿಂಬಾಧರವು ಮೊಗ್ಗಾಗಿಯೂ, ಕಾಂತಿಯುತವಾದ ಶ್ಯಾಮಳವರ್ಣದ ದಿವ್ಯಮಂಗಳ ವಿಗ್ರಹವು ಎಲೆಗಳಾಗಿಯೂ, ತಾವರೆಹೂಗಳನ್ನುಳ್ಳ ವಿಶಾಲವಾದ ತಟಾಕದಂತೆ ಬರುವ ಸ್ವಭಾವವುಳ್ಳವನೇ ಎಂದು ವರ್ಣಿಸಿದ್ದಾರೆ. ಅವನ ತೇಜಸ್ಸು ಒಳ್ಳೆಯವರಿಗೆ ಶೀತಲವಾಗಿಯೂ, ವಿರೋಧಿಗಳಿಗೆ ದಹಿಸುವ ಅಗ್ನಿಯಂತೆಯೂ ಇರುತ್ತದೆ. ಆದ್ದರಿಂದ ಯಾವ ರೀತಿ ಬಿಸಿಲುಗಾಲದಲ್ಲಿ ತಣ್ಣೀರಿನಲ್ಲಿ ಸ್ನಾನವನ್ನು ಮಾಡಿದರೆ ಹಿತವಾಗಿ ಮನಸಸಿಗೆ ಆನಂದವನ್ನುಂಟು ಮಾಡುವುದೋ ಹಾಗೆಯೇ ಆ ದೇವರೆಂಬ ಸರಸ್ಸಿನಲ್ಲಿ ನಾನು ಬಳಲಿದ ದುಃಖವನ್ನು ತೊರೆದು ಮುಳುಗಿ ಸ್ನಾನ ಮಾಡುತ್ತೇನೆ ಎಂದಿದ್ದಾರೆ.

---

## ಕುಲಶೇಖರಾಳ್ವಾರರು

– ಶ್ರೀಮತಿ ಪದ್ಮಿನಿ ಬಾಲು

**ಘುಷ್ಯತೇಯಸ್ಯ ನಗರೇರಂಗಯಾತ್ರಾ ದಿನೇ ದಿನೇ ।**
**ತಮಹಂ ಶಿರಸಾ ವಂದೇರಾಜಾನಾಂ ಕುಲಶೇಖರಂ ॥**

("ಶ್ರೀರಂಗಕ್ಷೇತ್ರಕ್ಕೆ ಶ್ರೀ ರಂಗನಾಥನ ದರ್ಶನಕ್ಕೆ ಯಾತ್ರೆಗೆ ಹೊರಡುತ್ತೇವೆ", ಎಂಬ ಉತ್ಸಾಹಭರಿತವಾದ ಘೋಷಣೆಯು ಪ್ರತಿನಿತ್ಯವೂ ಯಾವ ನಗರದಲ್ಲಿ ಕೇಳಿ ಬರುತ್ತದೆಯೋ ಅಂತಹ ನಗರದ ಅರಸನಾದ ರಾಜಾ ಕುಲಶೇಖರರಿಗೆ ನಾನು ಶಿರಬಾಗಿ ವಂದಿಸುತ್ತೇನೆ).

ಮುಕುಂದಮಾಲಾ ಸ್ತೋತ್ರದ ಮೇಲ್ಕಂಡ ಪ್ರಾರ್ಥನಾ ಪದ್ಯವನ್ನು ಯಾರು ತಾನೇ ಕೇಳಿಲ್ಲ? ಇಂತಹ ಸರಳವಾದ ಸಂಸ್ಕೃತ ಸ್ತೋತ್ರಮಾಲೆಯನ್ನು ಹೆಣೆದು ಮುಕುಂದನಿಗೆ ಸಮರ್ಪಿಸಿದವರು ಕುಲಶೇಖರಾಳ್ವಾರರು. ಆಳ್ವಾರರುಗಳಲ್ಲಿ ಇವರೊಬ್ಬರೇ ಕ್ಷತ್ರಿಯರು. ಚಕ್ರವರ್ತಿಯಾದ ಇವರಿಗೆ ಧೈರ್ಯಲಕ್ಷ್ಮಿ, ಕೀರ್ತಿಲಕ್ಷ್ಮಿ, ಸಂಪದ್ಲಕ್ಷ್ಮಿ, ಎಲ್ಲರೂ ಒಲಿದಿದ್ದರೂ ಸಹಈ ಎಲ್ಲರನ್ನೂ ತೊರೆದು ಭಕ್ತಿಲಕ್ಷ್ಮಿ ಮತ್ತು ವೈರಾಗ್ಯ ಲಕ್ಷ್ಮಿಯರ ಬೆನ್ನು ಹತ್ತಿದುದು ಕುಲಶೇಖರರ ವಿಶೇಷ.

ಇವರತನಿಯನ್ ಹೀಗಿದೆ:

**ಕುಂಭೇ ಪುನರ್ವಸೂಜಾತಂ ಕೇರಳೇ ಕೋಳ ಪಟ್ಟಣೇ।**
**ಕೌಸ್ತಭಾಶಂಧರಾಧೀಶಂ ಕುಲಶೇಖರಮಾಶ್ರಯೇ॥**

ಇವರು ಮಲಬಾರಿನ (ಕೇರಳದ) ತಿರುವಂಜಿಕ್ಕಳಂ (ಕೊಲ್ಲಿನಗರ, ಕೋಳಿಕ್ಕೋಡು) ಎಂಬ ಪ್ರಸಿದ್ಧವಾದ ನಗರದಲ್ಲಿ ಇಕ್ಷ್ವಾಕು ವಂಶದ ಶಿಬಿ ಚಕ್ರವರ್ತಿಯ ಮಗ ದೃಢವೃತರಾಜನಿಗೆ ಮಗನಾಗಿ ಪರಾಭವ ಸಂವತ್ಸರದ ಕುಂಭ (ಮಾಘ) ಮಾಸದ ದ್ವಾದಶೀ ಗುರುವಾರದಂದು ಪುನರ್ವಸು ನಕ್ಷತ್ರದಲ್ಲಿ ಶ್ರೀ ಮಹಾವಿಷ್ಣುವಿನ ಕೌಸ್ತುಭಾಂಶದಿಂದ ಜನಿಸಿದರು. ಪರಾಶರ ಭಟ್ಟರು ದೃಢವ್ರತನನ್ನು, ಚೇರವಂಶವೆಂಬ ಸಮುದ್ರದಲ್ಲಿ ಜನಿಸಿದ ಚಂದ್ರ, ಭಗವದ್ಭಕ್ತಿ ರಸಿಕ, ರಾಜರ್ಷಿಎಂದೆಲ್ಲಾ ಹೊಗಳಿದ್ದಾರೆ. ಇಂತಹ ವಂಶದಲ್ಲಿ ಜನಿಸಿದ ಶಿಶು ಭೂಮಿಗೆ ಬರುವಾಗಲೇ ಅಪರಿಮಿತವಾದ ತೇಜಸ್ಸಿನಿಂದ ಕೂಡಿದುದರಿಂದ ಕುಲಕ್ಕೆ ಶಿಖರಪ್ರಾಯವಾಗುವನೆಂದು ಇವನಿಗೆ "ಕುಲಶೇಖರ"ನೆಂದು ನಾಮಕರಣ ಮಾಡಿದರು.






ಕುಲಶೇಖರನು ಬಾಲ್ಯಾವಸ್ಥೆಯಲ್ಲಿರುವಾಗಲೇ ರಾಜಾದೃಢವ್ರತ ದಂಪತಿಗಳು ಅಕಾಲ ಮೃತ್ಯುವಿಗೆ ತುತ್ತಾದ ಕಾರಣ ಚಿಕ್ಕ ವಯಸ್ಸಿನಲ್ಲಿಯೇ ಇವರು ರಾಜ್ಯಭಾರವನ್ನು ವಹಿಸಿಕೊಳ್ಳಬೇಕಾಯಿತು. ಕ್ಷತ್ರಿಯರಿಗೆ ಇರಬೇಕಾಗಿದ್ದ ಧೈರ್ಯ ಸಾಹಸಗಳು ಬಾಲ್ಯದಲ್ಲಿಯೇ ಇವರಿಗೆ ರಕ್ತಗತವಾಗಿ ಬಂದಿತ್ತು. ಯುದ್ಧವಿದ್ಯೆಯನ್ನು, ಧರ್ಮ, ನೀತಿ, ಸ್ಮೃತಿ, ಶೃತಿ, ಇತಿಹಾಸ, ಪುರಾಣಗಳನ್ನೆಲ್ಲಾ ಆಳವಾಗಿ ಅಭ್ಯಾಸ ಮಾಡಿ ಇವುಗಳಲ್ಲಿ ನಿಷ್ಣಾತರಾದರು. ಚೋಳ ಮತ್ತು ಪಾಂಡ್ಯ ದೇಶಗಳನ್ನು ಜಯಿಸಿ ರಾಜ್ಯವನ್ನು ವಿಸ್ತರಿಸಿ "ಕೊಲ್ಲಿ ಕಾವಲನ್, ಕೂಡಲ್ ನಾಯಕನ್, ಕೋಳಿಕೋನ್ ಕುಲಶೇಖರನ್" ಎಂಬ ಬಿರುದುಗಳನ್ನು ಪಡೆದುಕೊಂಡರು. ಆಧ್ಯಾತ್ಮದ ಕಡೆಗೆ ರಾಜಾಕುಲಶೇಖರರಿಗೆ ವಿಶೇಷವಾದ ಒಲವು. ಭಗವದ್ಭಕ್ತಿ ಪರಾಯಣನಾದ ರಾಜನುಧರ್ಮ ಮಾರ್ಗದಲ್ಲಿ ರಾಜ್ಯ ನಡೆಸುತ್ತಿದ್ದ ಕಾರಣ ಪರಮಾತ್ಮನ ದಯೆಯಿಂದ ರಾಜ್ಯವು ಸಂಪದ್ಭರಿತವಾಗಿ ಪ್ರಜೆಗಳು ರೋಗರುಜಿನಗಳಿಂದ ದೂರಾಗಿ ನೆಮ್ಮದಿಯಿಂದ ಜೀವನ ನಡೆಸುತ್ತಿದ್ದರು.

ಕಾಲಕ್ರಮದಲ್ಲಿ ಸತ್ಕುಲ ಪ್ರಸೂತೆಯಾದ ಕನ್ಯೆಯೊಡನೆ ಇವರ ವಿವಾಹವು ನೆರವೇರಿ "ದೃಢವ್ರತ" ಎಂಬ ಪುತ್ರನೂ "ಇಳೈ" ಎಂಬ ಪುತ್ರಿಯೂ ಜನಿಸಿದರು. ಕುಲಶೇಖರರು ಮಕ್ಕಳನ್ನು ಸಕಲ ವಿದ್ಯಾ ಮತ್ತು ಕಲಾ ಪಾರಂಗತರಾಗಿಯೂ ಮತ್ತು ಭಕ್ತಿ ಸಂಪನ್ನರಾಗಿಯೂ ಬೆಳೆಸಿದರು. ವಿಶಾಲವಾದ ಮತ್ತು ಸುರಕ್ಷವಾದರಾಜ್ಯ, ತೃಪ್ತರಾದ ಪ್ರಜೆಗಳು, ಅನುಕೂಲಳಾದ ಪತ್ನಿ, ವಿಧೇಯರಾದ ಸಂತಾನ, ಹೀಗೆ ಕುಲಶೇಖರರಿಗೆ ಯಾವುದರಲ್ಲೂ ಕೊರತೆಯೆಂಬುದೇ ಇರಲಿಲ್ಲ. ಐಹಿಕ ಭೋಗಕ್ಕೆ ಅಗತ್ಯವಿರುವ ಸಕಲವೂ ಅವರಿಗೆ ಇದ್ದುದರಿಂದ ಎಲ್ಲ ವಿಲಾಸಗಳನ್ನೂ ಅನುಭವಿಸುತ್ತಾ ಸ್ವೇಚ್ಛೆಯಿಂದರಾಜ್ಯಭಾರ ಮಾಡಬಹುದಾಗಿತ್ತು. ಆದರೆ ತನ್ನ ಕೌಸ್ತುಭಾಂಶದಿಂದ ಚೇತನರ ಉದ್ಧಾರಕ್ಕಾಗಿ ಧರೆಗಿಳಿಸಿದ್ದ ಕುಲಶೇಖರರನ್ನು ಕುರಿತು ಭಗವಂತನ ಸಂಕಲ್ಪವೇ ಬೇರೆಯಾಗಿತ್ತು. ಕ್ರಮೇಣ ಇವರಿಗೆ ರಾಜ್ಯಭಾರದಲ್ಲಿ ಆಸಕ್ತಿ ಕುಂದತೊಡಗಿತು. ಪರತತ್ವವನ್ನು ಅರಿಯುವ ಕುತೂಹಲ ದಿನೇ ದಿನೇ ವೃದ್ಧಿಯಾಗಿ ಸಾಂಸಾರಿಕ ಜೀವನದಲ್ಲಿ ವಿರಕ್ತಿ ತಲೆದೋರತೊಡಗಿತು. ರಾಮ ಮತ್ತು ಕೃಷ್ಣಾವತಾರಗಳಲ್ಲಿ ಭಕ್ತಿಯುಂಟಾಗಿ ಪ್ರತಿದಿನವೂ ಅರಮನೆಯಲ್ಲಿ ರಾಮಾಯಣ ಕಥಾಕಾಲಕ್ಷೇಪವನ್ನೂ ಗೋಷ್ಠಿಯನ್ನೂ ನಡೆಸುವಏರ್ಪಾಡಾಯಿತು.

ಈ ಸತ್ಸಂಗದ ಫಲವಾಗಿ ಶ್ರೀರಂಗನಾಥನ್ನು ಸೇವಿಸಬೇಕೆಂಬ ಹಂಬಲ ತೀವ್ರವಾಗ ತೊಡಗಿತು. ಪ್ರತಿದಿನವೂ ಪ್ರಾತಃಕಾಲ ಶ್ರೀರಂಗವನ್ನು ಕುರಿತು ಪರಿವಾರದೊಂದಿಗೆ ಸನ್ನದ್ಧರಾಗುವ ವೇಳೆಗೆ ಅರಮನೆಯಲ್ಲಿ ಭಾಗವತರ ತಂಡವೊಂದು ಪ್ರತ್ಯಕ್ಷವಾಗಿರುತ್ತಿತ್ತು. ಭಾಗವತಾರಾಧನೆಯಲ್ಲಿ ತೊಡಗಿದ ಕುಲಶೇಖರರು ಶ್ರೀರಂಗಯಾತ್ರೆಯನ್ನು ಮರುದಿನಕ್ಕೆ ಮುಂದೂಡಬೇಕಾಗುತ್ತಿತ್ತು. ಕುಲಶೇಖರರುಒಮ್ಮೆ ಶ್ರೀರಂಗನಾಥನನ್ನು ದರ್ಶಿಸಿದರೆಂದರೆ ಅವರುತಮ್ಮರಾಜ್ಯಕ್ಕೆ ಹಿಂತಿರುಗುವುದಿಲ್ಲವೆಂಬುದನ್ನು ಮನಗಂಡಿದ್ದ ಮಂತ್ರಿಗಳು ರಾಜ್ಯದ ಹಿತದದೃಷ್ಟಿಯಿಂದ ಮಾಡಿದಏರ್ಪಾಡುಇದಾಗಿತ್ತು. ಹೀಗೇ ಭಾಗವತಾರಾಧನೆ, ಭಗವತ್ಸಂಬಂಧವಾದ ಚರ್ಚೆ, ರಾಮಾಯಣ ಪ್ರವಚನ, ಶ್ರವಣ ಎಂದು ದಿನಗಳು ಕಳೆಯುತ್ತಲೇ ಇದ್ದವು. ಶ್ರೀರಂಗ ಯಾತ್ರೆಯ ವೈಭವವನ್ನು ಭಾಗವತರಿಂದ ಕೇಳಿ ಆನಂದಿಸುತ್ತಾ, ಶ್ರೀರಂಗ ನಗರಿಯಲ್ಲಿ ಪ್ರಭುವಾದ ರಂಗನಾಥನು ಶೇಷಪರ್ಯಂಕದ ಮೇಲೆ ಹೇಗೆ ಶಯನಾಸೀನನಾಗಿರಬಹುದು, ಅವನ ಸೌಂದರ್ಯವು ಹೇಗೆ ನಯನ ಮನೋಹರವಾಗಿರಬಹುದು, ಎಂದು ನನ್ನ ನೇತ್ರದ್ವಯಗಳು ಅವನನ್ನು ಸಂದರ್ಶಿಸಿ ಎಂದು ಕೃತಾರ್ಥಗೊಂಡಾವು, ಎಂದು ಮನಸ್ಸಿನಲ್ಲೇ ಚಿಂತಿಸುತ್ತಾಹಗಲು ರಾತ್ರಿಗಳನ್ನು ತಳ್ಳುತ್ತಿದ್ದರು. ಅವರ ಮನಸ್ಸಿನ ತುಮುಲವು "ಪೆರುಮಾಳ್ ತಿರುಮೊಳಿ" ಎಂಬ ಅವರ ಕೃತಿಯಲ್ಲಿ ಪ್ರಕಟವಾಗಿದೆ.

– ಮುಂದುವರೆಯುವುದು

# ಬ್ರಹ್ಮಪುರಾಣದ ಸಾರಾಂಶ

– ಡಾ|| ಸಿ.ಎಸ್. ಊರ್ಮಿಳಾ

ಮುಂದುವರೆದ ಭಾಗ

"ಬ್ರಹ್ಮ ಪುರಾಣ" ಎಂದು ಹೆಸರೇ ತಿಳಿಸುವಂತೆ ಬ್ರಹ್ಮದೇವನೇ ಹೇಳಿದ ಪುರಾಣ. ಹದಿನೆಂಟು ಪುರಾಣಗಳಲ್ಲಿ ಇದು ಮೊದಲನೆಯದು, ಇದಕ್ಕೆ ಆದಿಪುರಾಣವೆಂದು ಹೇಳುತ್ತಾರೆ. ಪರಮಾತ್ಮನಾದ ಶ್ರೀಕೃಷ್ಣ ಸತ್ಯ ಜ್ಞಾನಾನಂದ ಸ್ವರೂಪನು, ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ, ನಿಯಮನ ಮುಂತಾದ ಎಲ್ಲವೂ ಅವನಿಂದಲೇ ಆಗುತ್ತದೆ. ಪ್ರತಿ ಕ್ಷಣದಲ್ಲಿಯೂ ಉತ್ಪತ್ತ್ಯಾದಿ ಅಸಂಖ್ಯ ವ್ಯಾಪಾರಗಳನ್ನು ಮಾಡುತ್ತಿದ್ದರೂ ಆ ಪರಬ್ರಹ್ಮವು ನಿತ್ಯಾನಂದಮಯವಾಗಿಯೇ ಇದೆ. ಪರಬ್ರಹ್ಮಕ್ಕೆ ಶ್ರಮ, ಚಿಂತೆ ಮುಂತಾದ ದೋಷಗಳಿಲ್ಲ. ಇವು ಬ್ರಹ್ಮ ಪುರಾಣದಲ್ಲಿ ಬರುವ ಪ್ರಮುಖವಾದ ಅಂಶ.

ಈ ಬ್ರಹ್ಮಪುರಾಣದಲ್ಲಿ 246 ಅಧ್ಯಾಯಗಳಿವೆ. ಇದರಲ್ಲಿ ಖಂಡ, ಸ್ಕಂಧ ಮುಂತಾದ ಬೇರೆ ಬೇರೆ ವಿಭಾಗವಿಲ್ಲ. ಇಲ್ಲಿಯ ಶ್ಲೋಕಗಳ ಸಂಖ್ಯೆ ಸುಮಾರು 14,000. ಲೋಮಹರ್ಷಣ ಸೂತರು, ಶೌನಕಾದಿ ಮಹಾಮುನಿಗಳಿಗೆ ಇಲ್ಲಿ ಕಥೆ, ಉಪಕಥೆಗಳ ಮೂಲಕ ವಿಷಯ ನಿರೂಪಣೆ ಮಾಡುತ್ತಾರೆ.

ಮೊದಲು, ಪ್ರಪಂಚ ಸೃಷ್ಟಿ ವಿಚಾರ. ಅನಂತರ ಪೃಥು ಚರಿತ್ರ, ಗೋರೂಪಳಾದ ಪೃಥಿವಿಯನ್ನು ಹಾಲು ಕರೆದಂತೆ ಎಲ್ಲವನ್ನೂ ಕರೆದು ಕರೆಸಿ ಅನ್ನ–ನೀರು–ವಸ್ತ್ರ, ರತ್ನ ಮುಂತಾದ ಎಲ್ಲಾ ಪದಾರ್ಥಗಳಿಂದ ಸಮಸ್ತ ಪ್ರಜೆಗಳಿಗೂ ಸುಖಮಯವಾದ ಜೀವನವನ್ನು ಒದಗಿಸಿಕೊಟ್ಟುವನು ಪೃಥುವು. ಈ ಪೃಥುವಿನ ಮಗಳೆಂದೇ ಭೂಮಿಗೆ ಪೃಥ್ವೀ, ಪೃಥಿವೀ ಎಂದು ಹೆಸರಿದೆ. ಇದರಲ್ಲಿ ಹದಿನಾಲ್ಕು ಮನ್ವಂತರಗಳು ಮತ್ತು ಸೂರ್ಯನಿಂದ ಬಂದಿರುವ ವೈವಸ್ವತ ವಂಶದ (ಸೂರ್ಯವಂಶದ) ವರ್ಣನೆ ಇದೆ. ಅಂತೆಯೇ ಚಂದ್ರವಂಶದ ವರ್ಣನೆಯ ಸಂದರ್ಭದಲ್ಲಿ ಶ್ರೀಕೃಷ್ಣನ ಚರಿತ್ರೆಯು ವಿವರವಾಗಿ ಬಂದಿದೆ. ಜಂಬೂದ್ವೀಪದ ವರ್ಣನೆ, ಭಾರತವರ್ಷ ಮುಂತಾದ ಎಲ್ಲಾ ವರ್ಷಗಳ ವರ್ಣನೆ, ಭಗವಂತ ನಾಮಸ್ಮರಣೆಯ ಮಹಿಮೆ ಮುಂತಾದುವುಗಳನ್ನು ವಿವರಿಸಲಾಗಿದೆ. ಸೂರ್ಯಾದಿ ಗ್ರಹಗಳು, ಭುವರಾದಿ ಲೋಕಗಳು, ಅವುಗಳ ಸ್ಥಿತಿಗತಿಗಳ ವಿವರಣೆ ಇಲ್ಲಿದೆ. ಅನೇಕ ತೀರ್ಥಕ್ಷೇತ್ರಗಳ ವರ್ಣನೆ, ಮೋಕ್ಷವಿಷಯದಲ್ಲಿ ವ್ಯಾಸರು ಮತ್ತು ಮುನಿಗಳ ಸಂವಾದ, ಬ್ರಹ್ಮ, ಭೃಗು ಮುಂತಾದವರ

 



ವಿಚಾರ ವಿಮರ್ಶೆ, ಪಾರ್ವತೀ ಚರಿತ್ರೆ, ಏಕಾಮ್ರಕ್ಷೇತ್ರ, ಉತ್ಕಲ ಕ್ಷೇತ್ರ, ಪುರುಷೋತ್ತಮ ಕ್ಷೇತ್ರಗಳ ಮಹಿಮೆ ಮುಂತಾದುವು ಇಲ್ಲಿವೆ. ಇಂದ್ರದ್ಯುಮ್ನ ರಾಜನ ವಿಷ್ಣುಭಕ್ತಿ, ಬ್ರಹ್ಮದೇವರ ಒಂದು ಕಲ್ಪದವರೆಗೆ ಬದುಕಿರುವ ಚಿರಂಜೀವಿಗಳಾದ ಮಾರ್ಕಂಡೇಯರ ಚರಿತ್ರೆ, ಪ್ರಳಯಕಾಲದಲ್ಲಿ ಸಮುದ್ರದಲ್ಲಿ ಆಲದಮರದ ಎಲೆಯಲ್ಲಿ ಬಾಲಮುಕುಂದನ ದರ್ಶನ – ಇವೆಲ್ಲವೂ ಇವೆ.

ಮುಂದೆ 106 ಅಧ್ಯಾಯಗಳಲ್ಲಿ, ಗೌತಮೀ, ಗಂಗಾ, ವೃದ್ಧ ಗಂಗಾ ಎಂದೇ ಪ್ರಸಿದ್ಧಳಾದ ಗೋದಾವರಿ ನದಿಯ ಮಹಿಮೆಯು ಬ್ರಹ್ಮ ನಾರದರ ಕಥೋಪಕಥೆಗಳ ಮೂಲಕ ವಿವರಿಸಲಾಗಿದೆ. ಗೌತಮರ ಮೂಲಕ ಭೂಲೋಕಕ್ಕೆ ಬಂದವಳು ಆದಿಗಂಗೆ, ಗಂಗೆಯ ಎರಡನೆಯ ಅಂಶ ಭಾಗೀರಥೀ ಗಂಗಾ, ಅವಳ ತಂಗಿ ಗಂಗಾ. ವಿಂಧ್ಯ ಪರ್ವತದ ಉತ್ತರದಲ್ಲಿದ್ದಾಳೆ. ಹಿರಿಯವಳಾದ ಅಕ್ಕ ಗಂಗೆ ವಿಂಧ್ಯ ಪರ್ವತದ ದಕ್ಷಿಣದಲ್ಲಿದ್ದಾಳೆ. ವೃದ್ಧಗಂಗೆಯ ದಡದಲ್ಲಿರುವ ತೀರ್ಥಗಳ ಮಹಿಮೆಯ ಸಂದರ್ಭದಲ್ಲಿ ಅನೇಕ ಸ್ವಾರಸ್ಯಕರವಾದ ನೀತಿಪೂರ್ಣವಾದ ಕಥೆಗಳು ಬಂದಿವೆ.

1) ಪರೋಪಕಾರಿಯಾದ ಪಾರಿವಾಳ ಮತ್ತು ಜೇಡ, 2) ಅಂಜನಾ ಕೇಸರಿ ಮತ್ತು ಹನುಮಂತನ ಕಥೆ, 3) ಭಾರ್ಗವ ಅಂಗಿರಸರ ಕಥೆ, 4) ಕಪೀವಂತನ ಕಥೆ, 5) ವಾಲಖಿಲ್ಯರ ಉತ್ಪತ್ತಿ, 6) ಅಜೀಗರ್ತ ಶುನಃಶೇಪರ ವೃತ್ತಾಂತ, 7) ದದೀಚಿ ಲೋಪಮುದ್ರಾ, ಪಿಪ್ಪಲಾದರ ಆಖ್ಯಾನ, 8) ಪಾರಿವಾಳ ಗೂಬೆಗಳ ಕಥೆ, 9) ಆಪಸ್ತಂಭರ ಕಥೆ, 10) ಸರಮಾರಣಿ ಆಖ್ಯಾನ, 11) ಮೌದ್ಗಲ್ಯದ ಕಥೆ, 12) ಮದುಚ್ಛಂದದ ಆಖ್ಯಾನ, 13) ಕದ್ರೂ–ವಿನತೆಯರ ವೃತ್ತಾಂತ, 14) ಪರಶು–ಶಾಕಲ್ಯ ವೃತ್ತಾಂತ, 15) ಚಿಚ್ಚಿಕಾ ಪಕ್ಷಿಯ ಕಥೆ – ಮುಂತಾದ ಗಂಗಾ ಸ್ನಾನವು ಪರಮ ಪವಿತ್ರವಾದುದು ಎಂಬುದನ್ನು ಇಲ್ಲಿ ತಿಳಿಸಲಾಗಿದೆ.

**ಗಂಗಾ ಗಂಗೇತಿ ಯೋ ಬ್ರೂಯಾತ್ ಯೋಜನಾನಾಂ ಶತೈರಪಿ ।**
**ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥**

ನೂರು ಯೋಜನ ದೂರದಲ್ಲಿದ್ದರೂ 'ಗಂಗಾ ಗಂಗಾ' ಎಂದು ಸ್ಮರಿಸಿದರೆ ಪಾಪವಿಮುಕ್ತನಾಗಿ ವಿಷ್ಣುಲೋಕವನ್ನು ಹೊಂದುತ್ತಾನೆ.

ವೃದ್ಧಗಂಗಾ ಎಂದೇ ಪ್ರಸಿದ್ಧಳಾದ ಗೋದಾವರಿಯು ಮಹಿಮೆಯು 106ನೇ ಅಧ್ಯಾಯದಲ್ಲಿದೆ. ಬೃಹಸ್ಪತಿಯು ಸಿಂಹರಾಶಿಯಲ್ಲಿರುವಾಗ ಗೋದಾವರೀ ಸ್ನಾನ, ಅಲ್ಲಿ ದಾನ ಮಾಡುವುದು ಅತ್ಯಂತ ಪುಣ್ಯಪ್ರದವಾದದ್ದು. ವಾಸುದೇವಮಹಿಮಾ, ಪುರುಷೋತ್ತಮ ಕ್ಷೇತ್ರ ಮಹಿಮಾ, ಕಂಡುಮಹರ್ಷಿ ಚರಿತ. ನಂತರ 34 ಅಧ್ಯಾಯಗಳಲ್ಲಿ ಕೃಷ್ಣಾವತಾರದ ವಿಸ್ತೃತವಾದ ವರ್ಣನ, ಮಥುರಾ ವೃಂದಾವನ, ದ್ವಾರಕೆಗಳಲ್ಲಿ ಶ್ರೀಕೃಷ್ಣನು ತೋರಿಸಿದ ಲೀಲೆಗಳು, ಶ್ರೀಕೃಷ್ಣನ ಪರಂಧಾಮಗಮನ ಮುಂತಾದುವುಗಳು ವರ್ಣಿತವಾಗಿವೆ. ಇಲ್ಲಿಯೂ ಭಾಗವತ, ವಿಷ್ಣುಪುರಾಣ, ಪದ್ಮಪುರಾಣಗಳಲ್ಲಿ ಇದ್ದಂತೆಯೇ ಇದೆ. ಇಲ್ಲಿ ಕರ್ಮವಿಪಾಕ, ನರಕ ಯಾತನೆ, ಪಾತಕ, ಉಪಪಾತಕ, ಬ್ರಹ್ಮಲೋಕ, ಪಿತೃಶ್ರಾದ್ಧ, ಪಿತೃಕಲ್ಪ, ವರ್ಣಾಶ್ರಮಧರ್ಮ, ಸದಾಚಾರ ಮಹಿಮಾ, ಚತುರ್ಯುಗ ವೃತ್ತಾಂತ, ಚತುರ್ವಿದ ಪ್ರಳಯಗಳ ವರ್ಣನವಿದೆ. ಯೋಗಸಾಂಖ್ಯ (25 ತತ್ವ ವರ್ಣನೆ), ವಸಿಷ್ಠ ಕರಾಲಜನಕ ಸಂವಾದ, ಕ್ಷರಾಕ್ಷರ ತತ್ವ, ಮೋಕ್ಷ ಧರ್ಮ, ವಿದ್ಯಾ ಅವಿದ್ಯಾ ನಿರೂಪಣ, 'ಬ್ರಹ್ಮವಾದ' ಸ್ವರೂಪ ನಿರೂಪಣ – ಇವೇ ಬ್ರಹ್ಮ ಪುರಾಣದ ಸಂಕ್ಷಿಪ್ತ ಪರಿವಿಡಿಯಾಗಿದೆ.

**ಫಲಶ್ರುತಿ**

**ಇದಂ ಯಃಶ್ರದ್ಧಯಾ ನಿತ್ಯಂ ಪುರಾಣಂ ವೇದ ಸಂಹಿತಮ್ ।**
**ಸಂಪಠೇತ್ ಶೃಣುಯಾನ್ಮರ್ತ್ಯಃ ಸಯಾತಿ ಭವನಂ ಹರೇಃ ॥**

ವೇದಕ್ಕೆ ಸಮಾನವಾದ ಈ ಪುರಾಣವನ್ನು ಓದುವ, ಕೇಳುವ ಹರಿಯ ಕೃಪಾಕಟಾಕ್ಷಕ್ಕೆ ಪಾತ್ರನಾಗುವನು.

## ಮಕ್ಕಳ ವಿಭಾಗ



– ದೇವಕಿ



– ಸ್ಮೃತಿ

**ಹೈಕು**

ಯುಗಾದಿ ಹಬ್ಬ
ತಂದೀತು ಹರುಷವ
ಮನೆಮನೆಯಲ್ಲಿ

ವಸಂತ ಋತು
ಆಗಮನ ಕೋಗಿಲೆ
ಇಂಪಾದ ಗಾನ

ಪ್ಲವ ನಾಮದಿ
ಸಂವತ್ಸರ ನೂತನ
ವರ್ಷಾದಾರಂಭ..!!

— ಪ್ರದ್ಯುಮ್ನ





ಮುಂದುವರೆದ ಭಾಗ

# ರಾಜಮಹಾರಾಜರ ಸಂವಾದ

– ಡಾ. ಎಂ.ವಿ. ಅನಂತಪದ್ಮನಾಭಾಚಾರ್ಯ ದಾಸನ್

ಅನುವಾದ : ಉ.ವೇ. ಭರತ್ ಭಟ್ಟರ್

ದೇಶಿಕ : ಆಚಾರ್ಯರ ನಿಯಮದಂತೆ.... (ಎಂದು ಭಾಷ್ಯಕಾರರನ್ನು ನಮಸ್ಕರಿಸಿ ಭಗವಂತನನ್ನು ಕಂಡು) "ಇನ್ನಮುದತ್ತಮುದಾಯ್ ಇರಂಗುಂ ತಿರುನಾರಣಾ" ಏಕೆ ನನ್ನ ವಿಷಯದಲ್ಲಿ ನಿನಗೆ ಈಪರಿಯ ವ್ಯಸನ? ನಿನ್ನೊಟ್ಟಿಗೆ ಭಕ್ತಿ ಇಲ್ಲದೆಯೇ ನಿನ್ನ ಚರಣಗಳಲ್ಲಿ ಆಶ್ರಯಪಡೆದೆನೇನು?

ಸ್ಥಾನಂ ಸಂಯಮಿ ಸಾರ್ವಭೌಮ ವಿಜಯಸ್ಥಾನೇ ವಿಧತ್ತೇ ಹರಿಃ (ಶ್ರೀಭಾಷ್ಯಕಾರರ ಕೋಟೆಯಾದ ತಿರುನಾರಾಯಣ ಪುರದ ಶ್ರೀಸಂಪತ್ಕುಮಾರನು ಯಶಸ್ವಿಯಾಗಿ ಪ್ರಕಾಶಿಸುತ್ತಿರುವನು) ಎಂದು ಹಾಡಿದೆನಲ್ಲವೇ?

ಶೆಲ್ವ : (ಅಲಕ್ಷ್ಯದಿಂದ) ಹಾಗೋ? ನೀನು ಹಾಡಿರುವೆಯಾ? ಎಷ್ಟು ಶ್ಲೋಕಗಳನ್ನು ಹಾಡಿರುವೆ? ರಂಗನಾಥನಿಗೆ ಪಾದುಕಾಸಹಸ್ರ, ಭಗವದ್ಧ್ಯಾನಸೋಪಾನ, ನ್ಯಾಸತಿಲಕ ಮೊದಲಾದವು ಅನುಗ್ರಹಿಸಿದಂತೆ ಹಾಡಿರುವೆಯಾ? ಇನ್ನು ವರದನ ವಿಷಯವಾಗಿ ವರದರಾಜ ಪಂಚಾಶತ್, ನ್ಯಾಸದಶಕ, ಅಡೈಕ್ಕಲಪತ್ತು ಮೈವಿರುದಮಾನ್ಯಂ ಮೊದಲಾದಂತೆ ಹಾಡಿರುವೆಯಾ? ಅದಲ್ಲದೆ ದೇವನಾಯಕ ಪಂಚಾಶತ್, ದಯಾಶತಕದಂತೆ ಐವತ್ತು ಶ್ಲೋಕಗಳಂತೆ ಹಾಡಿರುವೆಯೋ? ಸಂಕಲ್ಪ ಸೂರ್ಯೋದಯದಲ್ಲಿ ಎರಡು ಶ್ಲೋಕಗಳು ಅದರಲ್ಲಿ ಕೂಡಾ ರಾಮಾನುಜ ಸಂಬಂಧವಿರುವ ಕಾರಣ ನನ್ನ ಮಹಿಮೆಯನ್ನು ಹಾಡಿರುವೆ! ಈ ಹಿಂದೆ ನೀನು ಇಲ್ಲಿ ವಾಸ ಮಾಡಿದೆ ಎಂದು ಹೇಳಿದೆ. ಶ್ರೀರಂಗದಲ್ಲಿ ವಾಸಿಸಲು ಶಕ್ಯವಿಲ್ಲದ ಸಂದರ್ಭಗಳಲ್ಲಿ ನಿನಗೆ ನಾನೇ ಅಲ್ಲವೇ ಆಧಾರವಾಗಿದ್ದೆ? ನೀನೇನು, ಎಲ್ಲರೂ ಸೇರಿ ಮೇಲುಕೋಟೆಯಲ್ಲಿ ಸಂರಕ್ಷಿಸಲ್ಪಟ್ಟಿರಿ. ಆಶ್ರಯವನ್ನು ಕೊಟ್ಟ ನನ್ನನ್ನು ರಕ್ಷಣೆಗೆಂದು ಶರಣಾಗತಿ ಮಾಡುವುದನ್ನು ತ್ಯಜಿಸಿ ಶ್ರೀರಂಗದಲ್ಲೂ ಕಾಂಚೀಪುರದಲ್ಲೂ ಶರಣಾಗತಿ ಮಾಡಿದರು.

(......ದೇಶಿಕರು, ರಾಮಾನುಜರು ಮೌನವಾಗಿಯೇ ಇರುವರು).

ಶೆಲ್ವ : ನೋಡಿದಿರಾ? ಬಾಯಿ ತೆಗೆಯಲಾಗುತ್ತಿಲ್ಲ. ಏನೋ ಇಲ್ಲೇ ವಾಸ ಮಾಡಿದೆ ಎಂದು ಹೇಳಿದೆಯಲ್ಲಾ? ಇಲ್ಲಿರುವ ಶೈತ್ಯವನ್ನು ತಡೆಯಲಾಗಲಿಲ್ಲವೆಂದು ಶೀಘ್ರವಾಗಿ ಈ ಸ್ಥಳವನ್ನು ಬಿಟ್ಟು ಹೊರಡಬೇಕೆಂದು ಅವಸರ ಪಡಲಿಲ್ಲವೇ?

(...ಮೌನ)

ಶೆಲ್ವ : ಇನ್ನೂ ಹೇಳುವ ಕೇಳಿ.... ಏನೇ ಇದ್ದರೂ ನಿಮಗೆಲ್ಲಾ ದಕ್ಷಿಣಾಪಥದ ದಿವ್ಯದೇಶಗಳ ಅಭಿಮಾನವೇ ಅಧಿಕ.... ಎಷ್ಟೇ ಇದ್ದರೂ ಆ ನಿಟ್ಟಿನಲ್ಲಿ ನಾನು ನೂರೆಂಟು ದಿವ್ಯದೇಶಗಳ ಸಾಲಿನಲ್ಲಿ ಸೇರದೇ ಇರುವವನಲ್ಲವೇ?

ದೇಶಿಕ : ಪ್ರಭೋ.... ತಮ್ಮ ವಿಷಯವಾಗಿ ನಮ್ಮಾಳ್ವಾರರು 'ಒರುನಾಯಗಮಾಯ್' ಎಂಬ ಪದ್ಯದಲ್ಲಿ ಪೂರ್ಣವಾಗಿ ಈ ದಿವ್ಯದೇಶದ ವೈಭವವನ್ನೇ ಹಾಡಿರುತ್ತಾರೆ?

ಶೆಲ್ವ : (ಮತ್ತೆ ಅಲಕ್ಷ್ಯ) ನಿಜವನ್ನು ನುಡಿಯಿರಿ. ಅದು ನನ್ನ ವಿಷಯವಾದ ಪ್ರಬಂಧವೇ? ನಿಮ್ಮ ನಮ್ಮಾಳ್ವಾರರು ನನ್ನನ್ನು ಕುರಿತು ಹಾಡಿರುವರೇನು? ಏನೋ ನಮ್ಮ ಮೇಲಿರುವ ಅಭಿಮಾನದಿಂದ ಕೆಲವರು ಅನುಸಂಧಾನ ಮಾಡುತ್ತಾರೆ. 'ತಿರುನಾರಣ' ಎಂಬ ಪದವು ಬಂದಕಾರಣ ಅದು ನನ್ನ ವಿಷಯದ್ದಾಗುವುದೇ? ಹಾಗಾದಲ್ಲಿ ನನ್ನನ್ನು ನೂರೆಂಟರಲ್ಲಿ ಸೇರಿಸಬಹುದಾಗಿತ್ತಲ್ಲವೇ? ಅದು ಸರಿ. ನೀವು ಹೀಗೆಯೇ ಮೌನವಾಗುರುತ್ತೀರಿ. ನಾನೇನು ನಿಮಗೆ 'ಕವಿತಾರ್ಕಿಕ ಸಿಂಹ.... ಸರ್ವತಂತ್ರ ಸ್ವತಂತ್ರ' ಮೊದಲಾದ ಬಿರುದುಗಳನ್ನು ನೀಡಲಿಲ್ಲವಲ್ಲ? ಒಂದು ವೇಳೆ ನಾನು ನಿಮಗೆ ಬಿರುದುಗಳನ್ನು ನೀಡಿದ್ದೇ ಆಗಿದ್ದರು ನನಗೂ ಒಂದು ನೂರು ಶ್ಲೋಕವಾದರೂ ಲಭ್ಯವಾಗುವ ಸಾಧ್ಯತೆಗಳಿದ್ದವು. ಅದಕ್ಕಿಂತಲೂ ಮೋಸ. ಅಧಿಕಾರ ಸಂಗ್ರಹದಲ್ಲಿ ದಿವ್ಯದೇಶ ಮಂಗಳಾಶಾಸನದಲ್ಲಿ, ಮೊದಲಿಗೆ ಶ್ರೀರಂಗ, ನಂತರ ಶ್ರೀನಿವಾಸ ವರದನನ್ನು ಹಾಡಿರುವ ನೀನು ಅನಂತರದಲ್ಲಿ ನನಗೂ ಒಂದು ಪದ್ಯ ಹಾಡಲೆಳೆಸಲಿಲ್ಲ. ಇದ್ದರೂ ವಾಸ್ತವದಲ್ಲಿ ನಾನೇ ನಿಮ್ಮನ್ನು ಅಧಿಕವಾಗಿ ಕೊಂಡಾಡುತ್ತಿರುವೆ. ಇದೋ ಈ ರೀತಿಯಾದ ಉತ್ಸವಗಳು ಶ್ರೀರಂಗದಲ್ಲೂ ಕಾಂಚಿಯಲ್ಲೂ ತಿರುಮಲೆಯಲ್ಲೂ ಇಷ್ಟು ವೈಭವವಾಗಿ ನಡೆಯುವುದೇನು?

ದೇಶಿಕರು: ಯಾದವೇಂದ್ರ.... ನಿನ್ನ ದಾಸರ ವೈಭವಗಳನ್ನು ಎಣಿಸಿಯೇ ಅಲ್ಲವೇ (ಸಹಜಸುಲಭ ದಾಸ್ಯೈ......) ಸೌಜನ್ಯದಿಂದಲೂ ಸುಲಭವಾಗಿಯೂ ಇರುವ ಭಾಗವತೋತ್ತಮರು ಎಂದು ಹಾಡಿರುವೆ.

ಶೆಲ್ವ : ಸರಿಯೇ..... ಏನೋ ರಚಿಸುವ ವೇಗದಲ್ಲಿ ಒಂದು ವಾರ್ತೆಯನ್ನು ನುಡಿದಿರುವೆ. ಈವರೆಗೆ ನಾನು ಕೇಳಿದ ಪ್ರಶ್ನೆಗೆ ಉತ್ತರವೇ ಸಿಗಲಿಲ್ಲವಲ್ಲ?

ದೇಶಿಕ : ನಾರಾಯಣ, ಶ್ರೀರಂಗಕ್ಕೆ ಆಪತ್ತು ಬಂದೊದಗಿದ ಸಮಯಗಳಲ್ಲೆಲ್ಲಾ ನೀನು ನಮಗೆ ರಕ್ಷಕನಾದೆ ಎಂಬ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ನಿನ್ನನ್ನು ಈ ದಾಸನು ಸ್ತೋತ್ರ ಮಾಡಲಿಲ್ಲವೆಂದು ಏಕೆ ಸುಮ್ಮನೆ ಅಪವಾದ ಹೊರಸುತ್ತಿರುವೆ?

ಶೆಲ್ವ : ಹೋಯ್! ಪ್ರತಿವಾದಿ ಸಿಂಹರೇ.... ನಾನೇನು ಸುಮ್ಮನೆ ದೂಷಿಸಲಿಲ್ಲ. ಒಂದು ಬೃಹತ್ ಸ್ತೋತ್ರವನ್ನು ಏಕೆ






ರಚಿಸಲಿಲ್ಲವೆಂದು ಕೇಳಿದೆ.... ಹಂಸ ಸಂದೇಶದಲ್ಲಿಯೂ ಕರ್ನಾಟಕ – ಆಂಧ್ರಪ್ರದೇಶವು ಕೂಡುವ ಸ್ಥಳಗಳನ್ನೆಲ್ಲಾ ಬಣ್ಣಿಸುವಾಗ ಕೊಂಚ ಒಳಗೆ ಕಣ್ಣು ಹಾಯಿಸಿ, ಈ ಪರ್ವತದ ವಿಷಯವಾಗಿ ಒಂದು ಶ್ಲೋಕ ಹೇಳಬಹುದಾಗಿತ್ತು. ಚಂದ್ರಪುಷ್ಕರಿಣಿಯನ್ನು ವರ್ಣಿಸಿರುವ ನೀನು ಕಲ್ಯಾಣ ಪುಷ್ಕರಣಿಯ ಸೊಬಗನ್ನು ಏಕೆ ಬಣ್ಣಿಸಲಿಲ್ಲ?

ದೇಶಿಕರು: ನಾಥ! ನಿನ್ನ ಮೇಲೆ 70 ಶ್ಲೋಕಗಳುಳ್ಳ ದೊಡ್ಡದಾದ ಸ್ತೋತ್ರವನ್ನು ಹಾಡಿರುವೆನಲ್ಲ?

ಶೆಲ್ವ : ಅದೇಣು ಹೊಸದಾಗಿ ಹಾಡಿರುವೆ? ಇದುವರೆಗೂ ನಾನೆಲ್ಲೂ ಈ ಬಗೆಗೆ ಕೇಳರಿಯಲಿಲ್ಲವೇ? ನೀನು ಅನುಗ್ರಹಿಸಿದ ಹಲವು ಸ್ತೋತ್ರಗಳ ಹಾಗೆ ಒಂದು ವೇಳೆ ಈ ಗ್ರಂಥವೂ ಲುಪ್ತವಾಗಿರುವುದುಂಟೋ?

ದೇಶಿಕರು: ಈ ಹೊತ್ತಿನವರೆಗೂ ಎಲ್ಲಾ ದಿವ್ಯದೇಶಗಳಲ್ಲಿಯೂ ನಿನ್ನ ಸನ್ನಿಧಿಯಲ್ಲಿಯೂ ಅದು ಅನುಸಂಧಾನ ಮಾಡಲ್ಪಡುತ್ತಿರುವುದು ಆ ಸ್ತೋತ್ರವೇ ಯತಿರಾಜ ಸಪ್ತತಿ.

ಶೆಲ್ವ : (ಸ್ವಲ್ಪ ಕೋಪಗೊಂಡು) ಇದೆಂತಹ ಪಿತೃಭ್ರಮೆ! ನಾನೊಂದು ಕೇಳಿದರೆ ನೀನು ಬೇರೆ ಏನೋ ಹೇಳುತ್ತಿರುವೆ. ಯತಿರಾಜ ಸಪ್ತತಿ ನನ್ನ ವಿಷಯವಾದ ಸ್ತುತಿಯೇ? ಆ ಸ್ತೋತ್ರದಲ್ಲೆಲ್ಲಾ ನಿನ್ನ ಆಚಾರ್ಯರ ಕೃಪಾವಿಶೇಷವನ್ನಲ್ಲವೇ ಹಾಡಿರುವುದು?

(ವೇಗವಾಗಿ) ಓಹೋ! ದೇವಿಯರು ನನ್ನನ್ನು ರಾಮಾನುಜನೆಂದು ಕರೆದ ಕೂಡಲೇ ಅದು ವಿಷಯಕವಾದ ಸ್ತೋತ್ರವಾಗುವುದೇನು?

– ಮುಂದುವರೆಯುವುದು

# Thiruvaimoli

- T.C. Krishnamurthy

ಮನನಗ ಮಲಬರ ಮಲರ್ಮಿಶೈ ಎಳುದರುಮ್
ಮನನುಣರ್ ವಳವಿಲನ್ ಪೊರಿಯುಣರ್ ವವ್ವೆಯಿಲನ್ ।
ಇನನುಣರ್ ಮುಳುನಲಮ್ ಎದಿರ್ ನಿಗಳ್, ಕಳಿವಿನುಮ್
ಇನನಿಲನ್ ಎನನುಯಿರ್ ಮಿಗುನರೈಯಿಲನೇ ॥

**Meaning:**

The sense organs can comprehend only material objects. However, the mind cleansed of all impurities by yogic practice can comprehend a jivatma but not the Paramatma. The latter is far removed from the Ken of both chit and achit. There is nothing in the universe that can be considered higher than Him nor equal to Him. He remains peerless at all times, past, present and future.




**Wish You All a Happy Ugadi**

**Coming Soon Paduka Kainkaryam**






# ಶ್ರೀ ವೇಣುಗೋಪಾಲಸ್ವಾಮಿ ದೇವಸ್ಥಾನ, ದೇವನಹಳ್ಳಿ

ಶ್ರೀಮತಿ ಪದ್ಮಶ್ರೀ ರಘುನಂದನ್



**ಬೆಂಗಳೂರು** ನಗರದ ಹೊರವಲಯದಲ್ಲಿರುವ ದೇವನಹಳ್ಳಿ ಗ್ರಾಮದಲ್ಲಿ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಿಂದ ಸುಮಾರು 14 ಕಿ.ಮೀ. ದೂರದಲ್ಲಿ ಪುರಾತನವಾದ ಶ್ರೀ ವೇಣುಗೋಪಾಲಸ್ವಾಮಿ ದೇವಾಲಯವಿದೆ. ಹೊಯ್ಸಳರ ಶೈಲಿಯಲ್ಲಿ ನಿರ್ಮಾಣವಾಗಿರುವ ಈ ಪುಟ್ಟ ದೇವಸ್ಥಾನವು ಆಕರ್ಷಕ ಶಿಲ್ಪಕಲೆಯನ್ನು ಹೊಂದಿದೆ. ಆದರೆ ಮೂಲ ವಿಗ್ರಹವು ವಿಜಯನಗರದ ಶೈಲಿಯ ಕೆತ್ತನೆಯನ್ನು ಹೊಂದಿದ್ದು ಶಿಖರವು ದ್ರಾವಿಡ ಶೈಲಿಯಲ್ಲಿರುವುದು ವಿಶೇಷ. ಎತ್ತರದ ರಾಜಗೋಪುರದ ಇಕ್ಕೆಲಗಳಲ್ಲಿ ವಿಷ್ಣುವಿನ ಮೂರ್ತಿಗಳನ್ನು ಕಾಣಬಹುದು. ದೇವಸ್ಥಾನದ ಒಳಭಾಗದಲ್ಲಿ ವಿಶಾಲವಾದ ಪ್ರಾಕಾರವಿದ್ದು, ನವರಂಗ, ಮುಖಮಂಟಪ ಹಾಗೂ ಗರ್ಭಗೃಹಗಳನ್ನು ನಿರ್ಮಿಸಲಾಗಿದೆ. ಪ್ರಾಕಾರದ ಗೋಡೆಗಳ ಮೇಲಿರುವ ಕುಸುರಿಯ ಕೆತ್ತನೆ, ಕಂಬಗಳ ಮೇಲಿನ ಶಿಲ್ಪವಿನ್ಯಾಸಗಳು ಗೋಡೆಗಳ ಮೇಲೆ ಚಿತ್ರಿಸಲಾಗಿರುವ ರಾಮಾಯಣದ ಹಾಗೂ ಶ್ರೀಕೃಷ್ಣನ ಬಾಲಕಾಂಡದ ದೃಶ್ಯಗಳು ಬರುವ ಭಕ್ತಾದಿಗಳ ಮನಸೆಳೆಯುತ್ತವೆ. ಗರ್ಭಗೃಹದೊಳಗಿರುವ ಮನೋಹರವಾದ ಮೂಲಮೂರ್ತಿಯು ನಿಂತಿರುವ ಭಂಗಿಯಲ್ಲಿ ನೃತ್ಯಮಾಡಲು ಸಜ್ಜಾಗಿರುವಂತಿದೆ.

ಇಲ್ಲಿನ ಸ್ಥಳಪುರಾಣದ ಪ್ರಕಾರ, ದೇವೇಗೌಡನೆಂಬ ಪಾಳೇಗಾರನು 600 ವರ್ಷಗಳ ಹಿಂದೆ ದೇವನಹಳ್ಳಿಯ ಕೋಟೆಯನ್ನು ನಿರ್ಮಿಸಿ ಈ ದೇವಾಲಯವನ್ನು ಪ್ರತಿಷ್ಠಾಪಿಸಿದನು. ಪ್ರತಿವರ್ಷ ಚೈತ್ರಮಾಸದ ಹುಣ್ಣಿಮೆಯಂದು ಬಹಳ ವಿಜೃಂಭಣೆಯಿಂದ ಬ್ರಹ್ಮರಥೋತ್ಸವವು ನಡೆಯುತ್ತದೆ.

**ದೇವಸ್ಥಾನದ ದರ್ಶನದ ವೇಳೆ :**

ಬೆಳಿಗ್ಗೆ : 7.30ರಿಂದ 11.00 ಘಂಟೆಯವರೆಗೆ

ಸಂಜೆ : 6.00ರಿಂದ 8.30 ಘಂಟೆಯವರೆಗೆ

**ಹೆಚ್ಚಿನ ವಿವರಗಳಿಗೆ ಸಂಪರ್ಕಿಸಬಹುದಾದ ದೂರವಾಣಿ ಸಂಖ್ಯೆ:**
**ಶ್ರೀ ಕಣ್ಣನ್ ಭಟ್ಟರ್ : 9886536673**









ಪುಟ್ಟ ಕಥೆ



# ಆರೋಗ್ಯವಂತನು ಯಾರು?

"ಬೆಳಕು" ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ

– ಶ್ರೀ ಶ್ರೀ ರಂಗಪ್ರಿಯಸ್ವಾಮಿರವರ ಪೂರ್ವಾಶ್ರಮ ಲೇಖನ

ಆರೋಗ್ಯವೇ ಭಾಗ್ಯ; ಸಹಜವಾದ ಭಾಗ್ಯ, ಆರೋಗ್ಯ ಇರುವವರು ಮತ್ತು ಇಲ್ಲದವರು ಎಲ್ಲರೂ ಬಯಸುವ ಮಹಾಭಾಗ್ಯ. ಅದಕ್ಕೇ ಯಾರನ್ನಾದರೂ ಕುಶಲ ಪ್ರಶ್ನೆ ಮಾಡುವಾಗ "ಆರೋಗ್ಯವಾಗಿದ್ದೀರಿ ತಾನೇ?" ಎಂದು ಕೇಳುತ್ತೇವೆಯೇ ಹೊರತು "ಅನಾರೋಗ್ಯವಾಗಿದ್ದೀರಿ ತಾನೇ?" ಎಂದೂ ಯಾರೂ (ಸಾಮಾನ್ಯವಾಗಿ) ಕೇಳುವುದಿಲ್ಲ.

"ಆರೋಗ್ಯವಂತನ ಲಕ್ಷಣವೇನು? ಎಚ್ಚರವಾಗಿರುವಾಗ ತುಂಬಾ ಸುಟಿಯಾಗಿರುತ್ತಾನೆ, ಪಟುವಾಗಿರುತ್ತಾನೆ. ಆದರೆ ನಿದ್ರೆ ಮಾತ್ರ ಸರಿಯಾಗಿ ಮಾಡುವುದಿಲ್ಲ" ಎಂದರೆ ಇದು ಒಳ್ಳೆಯ ಆರೋಗ್ಯದ ಲಕ್ಷಣವಲ್ಲ. "ನಿದ್ರೆಯನ್ನು ಬಲು ಚೆನ್ನಾಗಿ ಮಾಡುತ್ತಾನೆ. ಆದರೆ ಎಚ್ಚರಿಕೆ ಬಂದಾಗ ಜಡಭರತ, ಯಾವುದಕ್ಕೂ ಲಾಯಕ್ಕಲ್ಲ" – ಎಂದರೆ ಇದೂ ಪೂರ್ಣವಾದ ಆರೋಗ್ಯದ ಲಕ್ಷಣವಲ್ಲ. "ಯಾವಾಗಲೂ ಕೆಟ್ಟ ಕನಸುಗಳನ್ನೇ ಕಾಣುತ್ತಾನೆ, ಬೆಚ್ಚಿ ಬೆದರುತ್ತಾನೆ" ಎಂದರೆ ಅದೂ ಒಳ್ಳೆಯ ಆರೋಗ್ಯದ ಲಕ್ಷಣವಲ್ಲ. ಎಚ್ಚರದಲ್ಲಿ, ಕನಸಿನಲ್ಲಿ ಮತ್ತು ನಿದ್ರೆಯಲ್ಲಿ, ಮೂರು ಸ್ಥಿತಿಗಳಲ್ಲೂ ಸುಟ್ಟಿಯಾಗಿರಬೇಕು, ಪಟುವಾಗಿರಬೇಕು. ದೇಹಶಾಸ್ತ್ರ, ಮನಶ್ಶಾಸ್ತ್ರಗಳು ಹೇಳುವಂತೆ ಆಯಾ ಸ್ಥಿತಿಗಳಲ್ಲಿ ಉಸಿರಾಟ, ರಕ್ತಪರಿಚಲನೆ, ಹೃದಯದ ಬಡಿತ ಇತ್ಯಾದಿ ಗುರುತುಗಳಿರಬೇಕು. ಹೀಗಿದ್ದರೆ ತಾನೇ ಅವನು ಆರೋಗ್ಯವಂತ ಎಂದು ವೈದ್ಯರು ಹೇಳುತ್ತಾರೆ.

ಆದರೆ ದೇಹ, ಮನಸ್ಸು ಮತ್ತು ಚೈತನ್ಯಗಳ ವಿಷಯವನ್ನು ತುಂಬಾ ಆಳವಾಗಿ ಅನುಭವದಿಂದ ತಿಳಿದ ಜ್ಞಾನಿಗಳು "ಮನುಷ್ಯನಿಗೆ ಮೇಲೆ ಹೇಳಿದ ಮೂರು ಸ್ಥಿತಿಗಳಲ್ಲದೆ ನಾಲ್ಕನೆಯ ಸ್ಥಿತಿಯೂ ಒಂದು ಉಂಟು. ಅದಕ್ಕೆ "ತುರೀಯ" ಅಥವಾ "ಸಮಾಧಿ" ಎಂದು ಹೆಸರು. ಅಲ್ಲಿ ಯಾವ ವಿಕಾರವೂ ಇಲ್ಲ. ಅದು ಸಹಜಸ್ಥಿತಿ. ಅಲ್ಲಿ ಸಂತೋಷ ತುಂಬಿರುತ್ತದೆ. ಅದು ಹುಚ್ಚಲ್ಲ, ಬೆಪ್ಪಲ್ಲ, ಕಲ್ಪನೆಯ ಕನಸಲ್ಲ, ಎಲ್ಲ ಮಾನವರೂ ಅನುಭವಿಸಬಹುದಾದ ಸತ್ಯ; ಸಾರ್ವಭೌಮ ಸತ್ಯ" ಎಂದು ಹೇಳುತ್ತಾರೆ.

ಆದ್ದರಿಂದ ಎಚ್ಚರ, ಕನಸು, ನಿದ್ರೆ ಮತ್ತು ತುರೀಯ – ಈ ನಾಲ್ಕು ಸ್ಥಿತಿಗಳನ್ನೂ ಯಾವನು ಸಹಜವಾಗಿ ಅನುಭವಿಸಬಲ್ಲನೋ ಅವನೇ ಪೂರ್ಣವಾಗಿ ಆರೋಗ್ಯವಂತ. ಆ ಅನುಭವಗಳಲ್ಲಿ ಯಾವುದೂ ಊನವಾಗಬಾರದು. ಅಷ್ಟೇ ಅಲ್ಲ, ತುರೀಯದಲ್ಲಿ ಮಾತ್ರವೇ ಪೂರ್ಣ ಸುಖ ಶಾಂತಿಗಳ ಅನುಭವ; ಉಳಿದ ಸ್ಥಿತಿಗಳಲ್ಲಿ ಅನುಭವಕ್ಕೆ ಬರುವುದು ಆ ಸುಖಶಾಂತಿ ಸಾಗರದ ಬಿಂದುಗಳು ಮಾತ್ರ.

"ಮೇಲೆ ಹೇಳಿದಂತಹ ಪೂರ್ಣವಾದ ಆರೋಗ್ಯಸ್ಥಿತಿಯನ್ನು ನಾವು ಪಡೆದಿದ್ದೇವೆ. ಆ ಭಾಗ್ಯವನ್ನು ಪಡೆಯುವ ಹಕ್ಕು ಎಲ್ಲ ಮಾನವರಿಗೂ ಇದೆ. ಅದನ್ನು ಪಡೆಯಲು ಪ್ರಾಮಾಣಿಕವಾಗಿ ಪ್ರಯತ್ನ ಮಾಡಿರಿ" ಎಂಬ ಸಂದೇಶವನ್ನು ನಮಗೆ ನೀಡುತ್ತಾರೆ ಬ್ರಹ್ಮಜ್ಞಾನಿಗಳು.

# ಮಹಾಭಾರತ ಒಂದು ಕಿರುಪರಿಚಯ

–ಉ.ವೇ. ಭರತ್‌ಭಟ್ಟರ್

ರಾಜಸೂಯನ ನಂತರ, ವೇದವ್ಯಾಸರು, "ಇನ್ನು ಹದಿಮೂರು ವರ್ಷಕ್ಕೆ, ನಿನ್ನ ನೆಪದಲ್ಲಿ ಭೂಮಿಯ ರಾಜಕುಲವೆಲ್ಲಾ ನಾಶವಾಗುವುದು" ಎಂದು ಧರ್ಮರಾಜನಿಗೆ ಭವಿಷ್ಯವನ್ನು ನುಡಿಯುತ್ತಾರೆ. ಕಂಗಾಲಾದ ಧರ್ಮರಾಜನು ನಡೆಯಲಿದ್ದ ಅನಾಹುತವನ್ನು ತಪ್ಪಿಸಲು, 'ಇನ್ನು ಮುಂದೆ ಹದಿಮೂರು ವರ್ಷಗಳ ನಂತರ ನನ್ನದಾಯಾದರೂ, ಶತ್ರುಗಳ ಅಧೀನದಲ್ಲಿದ್ದು ಜಗಳಕ್ಕೆ ಆಸ್ಪದವನ್ನು ನೀಡುವುದಿಲ್ಲ" ಎಂದು ಪ್ರತಿಜ್ಞೆಯನ್ನು ಮಾಡುತ್ತಾನೆ. ಇದನ್ನು ಬಳಸಿಕೊಂಡ ದುರ್ಯೋಧನನು ಪಾಂಡವರ ಐಶ್ವರ್ಯವನ್ನು ಅಪಹರಿಸಿ, ಜಯಿಸಲು ಶಕುನಿಯೊಂದಿಗೆ ಸಮಾಲೋಚಿಸಿ, ತಾನೂ ಒಂದು ಸಭೆಯನ್ನು ನಿರ್ಮಿಸಿ, ಪ್ರವೇಶೋತ್ಸವಕ್ಕೆ, ಪಾಂಡವರನ್ನು ಆಹ್ವಾನಿಸಿ, ವಿನೋದಕ್ಕಾಗಿ ಧರ್ಮಜನನ್ನು ಜೂಜಾಡಲು ಕರೆಯುತ್ತಾನೆ. ಮೋಸದ ಜೂಜಾಟದಲ್ಲಿ ಪಾಂಡವರು, ಸೋತು, ಪಣಕ್ಕಿಟ್ಟ ಪಾಂಚಾಲಿಯ ಮಾನಭಂಗವನ್ನು ಮಾಡಲು ಹೊರಟ್ಟಿದ್ದ ದುಷ್ಟ ಕೌರವರಿಂದ, ಶರಣಾದ ದ್ರೌಪದಿಯನ್ನು ಪವಾಡ ಸದೃಶ ರೀತಿಯಲ್ಲಿ ಶ್ರೀಕೃಷ್ಣನು ಸಂರಕ್ಷಿಸಿರುತ್ತಾನೆ. ಶರಣಾದವರನ್ನು ಭಗವಂತನು ಎಂದೂ ಕೈಬಿಡುವುದಿಲ್ಲವೆಂಬುದಕ್ಕೆ ಇದೇ ಸಾಕ್ಷಿ. ಹೆದರಿದ ಧೃತರಾಷ್ಟ್ರನು ದ್ಯೂತದಿಂದ ಪಡೆದ ಸಂಪತ್ತನ್ನು ಮತ್ತೆ ಪಾಂಡವರಿಗೆ ವರರೂಪದಲ್ಲಿ ಕೊಟ್ಟು ಕ್ಷಮೆಯಾಚಿಸಿ ಕಳುಹಿಸುತ್ತಾನೆ.



– ಮುಂದುವರೆಯುವುದು







# ಶ್ರೀಮದ್ರಾಮಾಯಣದ ಸಂದೇಶಗಳು

– ಉ.ವೇ. ಭರತ್ ಭಟ್ಟರ್

ದೇವಾಲಯದಲ್ಲಿ ವಿಶೇಷ ಪೂಜೆಗಳನ್ನು ಮುಗಿಸಿ ಇನ್ನೇನು ಸ್ವಗೃಹವನ್ನು ಕುರಿತು ಸೇರಬೇಕನ್ನುವಷ್ಟರಲ್ಲಿ ನಮ್ಮ ಹಳೆಯ ಸ್ನೇಹಿತರೊಬ್ಬರು ಸಿಕ್ಕರು. ತುಂಬ ದಿನಗಳಿಂದ ಯಾವ ಕಾರಣಕ್ಕಾಗಿ ತಾವು ದೇವಸ್ಥಾನಕ್ಕೆ ಬರಲಿಲ್ಲವೆಂದು ನಾನು ಅವರಲ್ಲಿ ಕೇಳಿದೆ. “ದೇವಾಲಯಕ್ಕೆ ಬರಲು ಭಯವಾಗುತ್ತೆ” ಎಂದರು ಅವರು. ನಾನು ಬೆಚ್ಚಿದೆ. ಭಯವೇಕೆ ಎಂದು ಕೇಳಿದಾಗ, ತನ್ನ ಬಗ್ಗೆ ಹಗುರವಾಗಿ, ಇಲ್ಲಸಲ್ಲದ ಆರೋಪಗಳನ್ನು ಹೊರಿಸಿ, ಮನ ನೋಯುವಂತೆ, ದೇವಾಲಯಕ್ಕೆ ಬರುವ ಇತರರು ಮಾತನಾಡಿಕೊಳ್ಳುತ್ತಾರೆಂದೂ, ಇವರ ಮಧ್ಯೆ ದೇವರ ದರ್ಶನ ಮಾಡಲು ಅವಕಾಶವಿದೆಯೋ ಇಲ್ಲವೋ ಎಂದು ತಿಳಿಯದೆ ತಾನು ದೇವಾಲಯಕ್ಕೆ ತುಂಬ ದಿನಗಳಿಂದ ಬರಲಿಲ್ಲವೆಂದು ಹೇಳಿದರು.

ದೇವಸ್ಥಾನಕ್ಕೆ ಹೋದಾಗ ನಮ್ಮ ಮನಸ್ಸನ್ನು ಚುಚ್ಚುವಂತೆ ಮಾತನಾಡುವ ವ್ಯಕ್ತಿಗಳ ವಿಷಯದಲ್ಲಿ ಹೇಗೆ ಪ್ರತಿಕ್ರಿಯಿಸಬೇಕೆಂದು ನಾವು ಮೊದಲು ತಿಳಿಯಬೇಕಲ್ಲವೇ. ಹೀಗೆ ಇದರ ವಿಷಯವಾಗಿ ಯೋಚಿಸುತ್ತಾ, “ಅಭಯ ಪ್ರಧಾನ ಸಾರ”ವೆಂಬ ಪೆರಿಯವಾಚಾನ್ ಪಿಳ್ಳೈ ಸ್ವಾಮಿಗಳ ಶ್ರೀಮದ್ರಾಮಾಯಣದ ತನಿಶ್ಲೋಕಿ ವ್ಯಾಖ್ಯಾನ ಗ್ರಂಥವನ್ನು ಸುಮ್ಮನೆ ತಿರುವು ಹಾಕಲು ತೆಗೆದೆ. ಪುಸ್ತಕವನ್ನು ತೆಗೆದ ಒಡನೆ ಕಂಡ ಶ್ಲೋಕವಿದು.

**ತೇಷಾಂ ಸಂಭಾಷಣಮಾಣಾನಾಂ ಅನ್ಯೋನ್ಯಂ ಸ ವಿಭೀಷಣಃ**
**ಉತ್ತರಂ ತೀರಮಾಸಾದ್ಯ ಖಸ್ಥ ಏವ ವ್ಯತಿಷ್ಠತ**

ರಾವಣನೆಂಬ ತನ್ನ ಸಹೋದರನನ್ನು ತ್ಯಜಿಸಿ, ಧರ್ಮವೊಂದೇ ತಲೆ ಕಾಯುವುದೆಂದು ತಿಳಿದ ವಿಭೀಷಣನು ಶ್ರೀರಾಮನು ಧರ್ಮದ ಸಾಕಾರಮೂರ್ತಿ ಎಂದು ತಿಳಿದು ಅವನಿಗೆ ಶರಣಾಗಲು ಬಂದನು. ಬಂದ ವಿಭೀಷಣನನ್ನು ಕಂಡ ಸುಗ್ರೀವನು ಸಂಶಯದಿಂದಲೂ, ಭಯದಿಂದಲೂ ತಮ್ಮನ್ನು ಕೊಲ್ಲಲೆಂದೇ ಇವನು ಬಂದಿದ್ದಾನೆಂದು ಸಂಶಯಿಸಿ ಇತರ ವಾನರರೊಡನೆ, ಅಲೋಚಿಸಿ ವಿಭೀಷಣನನ್ನು ಅಲ್ಲೆ ಸಂಹರಿಸುವುದಕ್ಕಾಗಿ, ಬೆಟ್ಟ, ಮರಗಳನ್ನೂ ಕಿತ್ತು ಹಿಡಿದು ಎಸೆಯುವುದಕ್ಕಾಗಿಯೂ ನಿಂತನು. ಎಲ್ಲ ವಾನರರು ಇವನನ್ನು ಕೊಲ್ಲಿ, ಕೆಡವಿ ಎಂದು ಕಠೋರವಾದ ಮಾತುಗಳನ್ನಾಡು–ತ್ತಿರುವಾಗಲೇ ಸ್ವಲ್ಪವೂ ವಿಚಲಿತನಾಗದೆ, ಕಠೋರ ಮಾತುಗಳನ್ನು ಅಲಕ್ಷಿಸಿ, ತಾಯನ್ನು ಅರಸಿ ಹೋಗುವ ಕರುವಿನಂತೆ ಶ್ರೀರಾಮನಿರುವ ಕಡಲಿನ ಉತ್ತರ ತೀರವನ್ನು ಸೇರಿ ನೆಮ್ಮದಿಯನ್ನು ಹೊಂದಿದನು ವಿಭೀಷಣನು.

ಮೊದಲೇ ಇವನು ವಿಭೀಷಣ, ವಿಭೀಷಣ ಎಂದರೇ, ವಿಗತ+ಭೂಷಣ; ಭೀತಿಯೇ ಇಲ್ಲದವನು ಎಂದು ಶಬ್ದದ ಅರ್ಥ.

ತನ್ನ ಬಗ್ಗೆ ಹಗುರವಾಗಿ ಮಾತಾಡಿ, ಕೊಲ್ಲುವವರೆಗೂ ಉದ್ಯುಕ್ತರಾದ ವಾನರರಲ್ಲೂ ಭಯವಿಲ್ಲದೆ ಅಲಕ್ಷಿಸಿ, ಧರ್ಮನಿಷ್ಠನಾದ ಶ್ರೀರಾಮನೇ ಗತಿಯೆಂದು ತಾನು ಶತ್ರು ಪಕ್ಷದವನಾದರೂ, ಶ್ರೀರಾಮನೆಂದಿಗೂ ಶರಣಾಗತರನ್ನು ಕೈಬಿಡುವುದಿಲ್ಲವೆಂಬ ಮಹಾವಿಶ್ವಾಸದಿಂದ, ತ್ವರೆಯಿಂದ ಮುಹೂರ್ತ ಕಾಲದಲ್ಲಿ ರಾಮ ಬಂದನು. ರಾಮನನ್ನು ಹೊಂದಲು ರಾಮನಿರುವ ಸ್ಥಳಕ್ಕೆ ಹೋಗಬೇಕಲ್ಲವೇ. ಲಂಕೆಯಲ್ಲಿ ದುಷ್ಟ ರಾವಣನ ಸಂಘದಲ್ಲಿರುವುದಕ್ಕಿಂತಲೂ, ಶ್ರೀರಾಮನಿಗೆ ಶರಣಾಗುವುದೋ ಅಥವಾ ವಾನರರಿಂದ ಹತನಾಗುವುದೇ ಮೇಲೆಂದು ವಿಭೀಷಣನು ತಿಳಿದಿರಬೇಕು. ಈ ಪರಿಪಕ್ವತೆ ನಮಗೂ ಬೇಕಲ್ಲವೇ!

ದೇವಾಲಯದಲ್ಲಿ ನಮ್ಮ ಬಗ್ಗೆ ಯಾರು ಏನೇ ಮಾತನಾಡಲಿ, ಅಲಕ್ಷಿಸಿ, ದೇವರೇ ಉದ್ದೇಶ್ಯವೆಂದು, ದೇವಾಲಯವೇ ಪುರುಷಾರ್ಥವೆಂದು ಭಾವಿಸಿ ದೇವಾಲಯಕ್ಕೆ ಬರುವವರು ಶ್ರೀ ವೈಷ್ಣವರು. ಸಂಸಾರದಲ್ಲಿ ಬಿದ್ದು ಸಾಯುವುದಕ್ಕಿಂತಲೂ, ಶ್ರೀರಾಮನ ಸಾನ್ನಿಧ್ಯದಲ್ಲಿ ನೆಮ್ಮದಿಯನ್ನು ಹುಡುಕುವುದೇ ಮೇಲೆಂದು ನಾವು ತಿಳಿಯಬೇಕಲ್ಲವೇ.

ಅದು ಸರಿ, ಧರ್ಮಿಷ್ಟನಾದ ವಿಭೀಷಣನು ಈ ರೀತಿ ವಾನರರಿಂದ ಕಠೋರವಾದ ನುಡಿಗಳನ್ನು ಕೇಳುವಂತೆ ಏಕಾಯಿತು ಎಂಬ ಪ್ರಶ್ನೆ ಬರಬಹುದು. ಹಿಂದೆ ಇದೇ ವಿಭೀಷಣನು ಸೀತಾಪಹಾರ ವಿಷಯವಾಗಿ ರಾವಣನಿಗೆ ಎಚ್ಚರಿಕೆಯ ಮಾತುಗಳನ್ನು ಹೇಳಬೇಕಾದರೇ, ಸೀತೆಯನ್ನು ಸರ್ಪಕ್ಕೆ ಹೋಲಿಸಿ, ಈ ಸರ್ಪವನ್ನು ಮುಟ್ಟಿದರೇ ಕಚ್ಚುವುದು ಖಚಿತವೆಂದು ತಿಳಿಯದೇ ಅನುಚಿತವಾಗಿ ಸೀತೆಯ ಬಗ್ಗೆ ಮಾತನಾಡಿದ ಕಾರಣ ಈ ರೀತಿ ತಾನು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ತನ್ನ ಬಗ್ಗೆ ಕಠೋರ ನುಡಿಗಳನ್ನು ಕೇಳಬೇಕಾಯಿತು ಎಂದು ಪೂರ್ವಾಚಾರ್ಯರು ತೋರಿಸುತ್ತಾರೆ.

ನಾವೂ ಸಹ ತಿಳಿದೋ, ತಿಳಿಯದೆಯೋ ಅನೇಕ ಅಪರಾಧಗಳನ್ನು ಮಾಡಿರುತ್ತೇವೆ. ನಮ್ಮ ಬಗ್ಗೆ ಯಾರಾದರೂ ಕೆಟ್ಟ ಮಾತುಗಳನ್ನು ಹೇಳಿದರೆ ನಾವು ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತವಾಯಿತೆಂದು ತಿಳಿದು ಭಗವದ್ಗುಣಗಳನ್ನು ಚಿಂತಿಸಬೇಕೇ ಹೊರತು ಅದರ ವಿಷಯದಲ್ಲಿ ದ್ವೇಷವನ್ನು ಬೆಳೆಸಿಕೊಳ್ಳಬಾರದು ಅಲ್ಲವೇ!

## ಪ್ರಶ್ನೋತ್ತರ

1. ಅರ್ಜುನನ ಶಂಖದ ಹೆಸರೇನು?
2. ಕರ್ಣನ ಸಾಕು ತಾಯಿಯ ಹೆಸರೇನು?
3. ಅರ್ಜುನನಿಗೆ ಎಷ್ಟು ಜನ ಪತ್ನಿಯರಿದ್ದರು?
4. ಸತ್ಯವತಿಗೆ ಎಷ್ಟು ಜನ ಗಂಡುಮಕ್ಕಳಿದ್ದರು?
5. ಗಾಂಧಾರಿಗೆ ಎಷ್ಟು ಜನ ಗಂಡುಮಕ್ಕಳಿದ್ದರು?

ಉತ್ತರಗಳು:
1. ದೇವದತ್ತ, 2. ರಾಧ, 3. ನಾಲ್ಕು, 4. ಮೂರು, 5. ನೂರು






# ಪರಮಹಂಸೇತ್ಯಾದಿ ಶ್ರೀಶ್ರೀಪರವಾಕೋಟ್ಟೈ ಶ್ರೀಮದಾಂಡವನ್ ಪೌಂಡರೀಕಪುರಂ ಶ್ರೀ ಗೋಪಾಲದೇಶಿಕ ಮಹಾದೇಶಿಕರ ಶತಮಾನೋತ್ಸವದ ವೈಭವ – 20 ಮಾರ್ಚ್ 2021

## ಭಾವಚಿತ್ರಗಳ ಪ್ರದರ್ಶನ




ಪುರಪ್ಪಾಡು – ಉತ್ಸವ



ಆಶ್ರಮದ ವಿಶೇಷ ಸಂದರ್ಭಗಳ ಭಾವಚಿತ್ರಗಳ ಪ್ರದರ್ಶನ




ಆಚಾರ್ಯರ ದಿವ್ಯವಿಗ್ರಹದ ಬೀದಿಉತ್ಸವ



ಶ್ರೀಭಾಷ್ಯ ವಿದ್ವತ್ಸದಸ್ಸು



ವಿದ್ವತ್ ಸನ್ಮಾನ

 